ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ವಜ್ರಮಹೋತ್ಸವ ಪ್ರತಿಷ್ಠಾನ ಸ್ಮಾರಕಗಳು ಶ್ರೀ ಸಿದ್ಧಗಂಗಾ ಮಠ ತ್ರಿವಿಧ ದಾಸೋಹ ಮಹಾಕಾರ್ಯಗಳಿಗೆ ವಿಶ್ವವಿಖ್ಯಾತ.



ಬೃಹತ್ ಪ್ರಸಾದ ನಿಲಯದ ಒಂದು ಪಾರ್ಶ್ವ ನೋಟ



ಬೃಹತ್ ವಿದ್ಯಾರ್ಥಿ ನಿಲಯದ ಒಂದು ಪಾರ್ಶ್ವನೋಟ.

ರಾಷ್ಟ್ರೀಯ ಏಕತೆ ಮತ್ತು ಭಾವೈಕ್ಯತೆ ಸಾಂಕೇತಿಕವಾಗಿ 5 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಲಾಗುತ್ತಿದೆ.ಸರ್ವರ ಕಲ್ಯಾಣವನ್ನೆ ಬಯಸುತ್ತಿರುವ ಶ್ರೀಮಠದ ಐತಿಹಾಸಿಕ ಸ್ಮಾರಕಗಳಿಗೆ ನಾಡಿನ ಜನತೆ ಉದಾರವಾಗಿ ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನೆರವು ನೀಡಬೇಕಾಗಿ ಕೋರುತ್ತೇವೆ.

ಡಾ॥ ಎಂ. ಸಿ ಬೋದಿ, ಅಧ್ಯಕ್ಷರು,

ಬಿ. ಎಸ್. ಮುದ್ದಪ್ಪ, ಐ.ಎ.ಎಸ್ ಕಾರ್ಯಾಧ್ಯಕ್ಷರು

ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ವಜ್ರಮಹೋತ್ಸವ ಪ್ರತಿಷ್ಠಾನ
ಶ್ರೀ ಸಿದ್ಧಗಂಗಾ ಮಠ, ತುಮುಕೂರು ಜಿಲ್ಲೆ-572104.

# ಸಿದ್ಧಗಂಗಾ

ಸಂಪುಟ-30. ಸಂಚಿಕೆ 6 ಜೂನ್—1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಡಲು ದೊಡ್ಡದು ತಂದೆ ಅಲೆಯು ಚಿಕ್ಕದು ಪ್ರಭುವೆ
ನಿನ್ನ ಮುಂದೆ ಕಿರು ಅಲೆಯು ತೆರವಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಅಣು ನಾನು ಮಹನೀನು ಚಿನ್ಮಯದ ಶ್ರೀಗಿರಿಯೆ
ಕಣ ಕಣದಿ ಅನುರಣಿಪೆ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಅಧಿಕಾರ ಹಣ ಕೀರ್ತಿ ಸುಖದ ಬೆನ್ನನೆಹತ್ತಿ
ಬರಿದೆ ತೊಳಲದ ರೀತಿ ನೀನಿರಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್. ವಿ. ವೀರಭದ್ರಯ್ಯ.

## ಶ್ರೀವಾಣಿ



ಒಬ್ಬ ರಾಜನಿದ್ದ. ಬೇಟೆಯಲ್ಲಿ ಅವನಿಗೆ ತುಂಬ ಆಸಕ್ತಿ. ಯಾವಾಗಲೂ ಯಾರಾದರೂ ಹೊಸಬರು. ಭೇಟಿಯಾದರೆ ಅವರೊಂದಿಗೆ ಬೇಟೆಯ ವಿಷಯವನ್ನು ಪ್ರಸ್ತಾಪಿಸುತ್ತಿದ್ದ. ಒಮ್ಮೆ ಬೇಟೆಗೆ ತಯಾರಿ ನಡೆಸಿದ್ದ. ಬಹುದೂರದ ಅರಣ್ಯದಲ್ಲಿ ಬೇಟೆ ನಿಗದಿಯಾಗಿತ್ತು. ಅದಕ್ಕಾಗಿ ಪರಿಚಾರಕರು, ಬೇಟೆಗಾರರು, ಮಂತ್ರಿಗಳು ಬೇಟೆಗೆ ಬೇಕಾಗುವ ಆಯುಧಗಳು, ಬೇಟೆನಾಯಿಗಳು, ಬಲೆಗಳು, ಹಗ್ಗಗಳು,–ಇತ್ಯಾದಿಯಾಗಿ ಸಿದ್ಧತೆ ನಡೆದಿತ್ತು, ಆ ವೇಳೆಗೆ ಒಬ್ಬ ಸನ್ಯಾಸಿ ರಾಜನನ್ನು ನೋಡಲೆಂದು ಬಂದ. ಬಂದವನು ನಡೆದಿದ್ದ ಬೇಟೆಯ ವ್ಯವಸ್ಥೆಯನ್ನು ಗಮನಿಸಿದ. ರಾಜನನ್ನು ಪ್ರಶ್ನಿಸಿದ. ಏಕೆ ಇಷ್ಟೊಂದು ಸಿದ್ಧತೆ ಎಂಬುದಾಗಿ ಕೇಳಿದ ರಾಜ ತಾನು ಬೇಟೆಗೆ ಹೊರಟಿರುವುದಾಗಿಯೂ, ಬಹುದೂರದ ಅರಣ್ಯದಲ್ಲಿ ಬೇಟೆಯಾಡುವುದಾಗಿಯೂ, ಬಹುದಿನದ ಪ್ರಯಾಣವಾಗಿದೆ ಎಂದೂ ತಿಳಿಸಿದ. ತಕ್ಷಣವೇ ಸನ್ಯಾಸಿ ಕೇವಲ ಕೆಲವೇ ದಿನಗಳ, ಕೊಂಚ ದೂರದ ಪ್ರಯಾಣಕ್ಕಾಗಿ ಇಷ್ಟೊಂದು ಸಿದ್ಧತೆ ಮಾಡಿಕೊಳ್ಳುತ್ತಿರುವಾಗ "ದೂರದ ಪ್ರಯಾಣ"ಕ್ಕಾಗಿ ಯಾವ ಸಿದ್ಧತೆ ಮಾಡಿಕೊಂಡಿದ್ದೀಯ ಎಂದು ಪ್ರಶ್ನಿಸಿದ. ರಾಜ ಪ್ರತಿಯಾಗಿ ಯಾವ ಪ್ರಯಾಣ? ಎಷ್ಟುದೂರ ? ಎಂದು ಕೇಳಿದ. ಸನ್ಯಾಸಿ ನುಡಿದ ಎಲ್ಲರೂ ಒಂದಲ್ಲ ಒಂದು ದಿನ ಮಾಡಲೇಬೇಕಾದ ಪ್ರಯಾಣ ಅದು. ಬಹುದೂರವಾದರೂ ಹೋಗಲೇಬೇಕಾದ, ಹೋಗುವುದು ಅನಿವಾರ್ಯವಾದ ಪ್ರಯಾಣವಾಗಿದೆ ಎಂದ. ರಾಜ ಮತ್ತೆ ಕೇಳಿದ. ಸ್ವಾಮಿ ಸ್ವಲ್ಪ ಬಿಡಿಸಿ ಹೇಳಿ, ನನಗೆ ಅರ್ಥವಾಗಲಿಲ್ಲ ಎಂದಾಗ. ರಜ, ಅದು ಸಾವು ಎಂದ. ಸಾವನ್ನು ತಪ್ಪಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. ಆದರೆ ಆ ಸಾವು ಭಯ ಭೀತಿಗಳ ನಿಲ್ದಾಣವಾಗದಂತೆ ಶಾಂತಿ ನೆಮ್ಮದಿ ತೃಪ್ತಿಗಳ ಧಾಮವಾಗುವಂತೆ ಪ್ರಯಾಣ ಮಾಡಬೇಕಾಗುತ್ತದೆ ದಾರಿಯುದ್ದಕ್ಕೂ ಪರೋಪಕಾರಿಯಾದ ಕೆಲಸ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಬೇಟೆಯಾಡುವುದೆಂದರೆ ಪ್ರಾಣಿ ಹಿಂಸೆಯೆಂದಲ್ಲವೇ ? ಹಿಂಸೆಯಿಂದ ನೋವನ್ನು ಬಿತ್ತಿ ಬಳೆದಂತಾಗಲಿಲ್ಲವೇ? ರಾಜನಾದವನು ನೋವನ್ನು ಪರಿಹರಿಸಬೇಕೇ ಹೊರತು ಹಿಂಸೆಯನ್ನು ಬೆಳೆಯಬಾರದು. ಹಿಂಸೆಯ ಬುತ್ತಿಯನ್ನು ಕಟ್ಟಿಕೊಂಡು ಪ್ರಯಾಣ ಮಾಡಿದಾಗ ಹಿಂಸೆಯನ್ನೇ ಊಟ ಮಾಡಬೇಕಾದೀತಲ್ಲವೆ ? ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯಕಟ್ಟಿ ಅಕಳಹಾಲನ್ನೆರದು ಜೇನುತುಪ್ಪವ ಸುರಿದರೆ ಕಹಿಯಲ್ಲದೆ ಸಿಹಿಯಾದೀತೆ– ಎಂದಲ್ಲವೆ ಅಣ್ಣ ಬಸವಣ್ಣನವರು ಹೇಳಿದ್ದು ಎಂದು ಸನ್ಯಾಸಿ ವಿವರಿಸಿದ. ರಾಜನಿಗೆ ಜ್ಞಾನೋದಯವಾಯಿತು, ವ್ಯಕ್ತಿಗೆ ಸ್ವಂತ ಬುದ್ಧಿಯಾದರೂ ಇರಬೇಕು ಇಲ್ಲವೇ ಹೇಳಿದವರ ಮಾತನ್ನಾದರೂ ಕೇಳಬೇಕು.

(19-5-94 ರಂದು ಸಕಲೇಶಪುರದಲ್ಲಿ ಬಸವಜಯಂತಿ ಸಮಾರಂಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ.)

**ಲೇಖಕರಲ್ಲಿ ಮನವಿ**

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ **ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ** ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

**" ಸಂಪಾದಕರು ",**
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.

**ಚಂದಾ ದರ**
ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

## ಶ್ರೀ ಸಿದ್ಧಲಿಂಗೇಶ್ವರ ವಚನ



ಗಂಡಿಂಗೆ ಹೆಣ್ಣಲ್ಲದೆ ಹೆಣ್ಣಿಂಗೆ ಹೆಣ್ಣುಂಟೆ ಲೋಕ ದೊಳಗೆ ?
ಈ ಅರೆಮರುಳ ಶಿವನ ನಾನೆಂಬೆನಯ್ಯಾ ?
ಅಪಮಾನವ ಅನ್ಯರಿಗೆ ಕೊಡುವ ದೇವನ ಮರುಳತನವ ನೋಡಾ !
ಅದೇನು ಕಾರಣವೆಂದಡೆ
ಪತಿರ್ಲಿಂಗಂ ಸತಿಶ್ಶಾಹಮಿತಿಯುಕ್ತಂ ಸದಾ ತಥಾ
ಪಂಚೇಂದ್ರಿಯ ಸುಖಂ ನಾಸ್ತಿ ಶರಣಸ್ಥಲಮುತ್ತಮಂ,
ಎಂದುದಾಗಿ ಮುಕ್ಕಣ್ಣಂಗೆ ನಾ ಹೆಣ್ಣಾದಕಾರಣ
ಎನ್ನ ಕರಣೋಪಕರಣಂಗಳೆಲ್ಲವು ಲಿಂಗೋಪಕರಣಂಗಳಾಗಿ
ನಿಮ್ಮ ಚರಣವೆ ಹರಣವಾಗಿರ್ದೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ

ಶರಣಸ್ಥಲದಲ್ಲಿದ್ದವನು ಹೆಣ್ಣಿನ ಸುಖವನ್ನು ಸಂಪೂರ್ಣವಾಗಿ ಬಿಟ್ಟವನಾಗಿರಬೇಕು ಯಾಕೆಂದರೆ ಶರಣನು ಶಿವನಿಗೆ ಹೆಣ್ಣಾಗಿದ್ದ ಕಾರಣ ಪುನಃ ಅವನಿಗೆ ಹೆಣ್ಣಿನ ಅವಶ್ಯಕತೆಯೆಲ್ಲಿ ಬರಬೇಕು. ಶರಣನಿಗೆ ಲೌಕಿಕ ಸುಖದ ಉಪಾಯವೆನಿಸಿದ ಹೆಣ್ಣಿನ ಸಹವಾಸಕ್ಕಿಂತಲೂ ಪಾರಮಾರ್ಥಿಕ ಸುಖದ ಉಪಾಯವಾದ ಲಿಂಗಪತಿಯ ಸಂಗವು ಹೆಚ್ಚು ಮಹತ್ವದ್ದಾಗಿ ತೋರುವುದು ಶರಣನ ಕರಣೋಪಕರಂಗಳೆಲ್ಲವೂ ಲಿಂಗೋಪಕರಣಂಗಳಾಗಿಯೆ ಪರಿಣಮಿಸಿ ಅವನಿಗೆ ಶಿವನ ಚರಣವೇ ಹರಣವಾಗಿ ಬಿಡುವುದು.

[ಕೃಪೆ:- ಷಟ್‌ಸ್ಥಲ ಜ್ಞಾನಸಾರಾಮೃತ. ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ.ಎಡೆಯೂರು ಗದಗ.

# ಸಂಪಾದಕೀಯ

ಬಸವಣ್ಣನವರು ಮಾನವೀಯತೆಯನ್ನು ಬಿತ್ತಿ ಬೆಳೆದ ದೇವ ಕೃಷಿಕರು. ದುಡಿಮೆಯನ್ನು ಗೌರವಿಸಿದ ದೊಡ್ಡವರು. ಹಂಚಿ ಊಟಮಾಡುವುದನ್ನು ಕಲಿಸಿದ ಪುಣ್ಯಾತ್ಮರು. ಬಸವಣ್ಣನವರು ವೈಯಕ್ತಿಕ ಚಾರಿತ್ರ್ಯಕ್ಕೆ ಮನ್ನಣೆಕೊಟ್ಟರು. ಸಮಾಜದ ಚಾರಿತ್ರ್ಯ ವ್ಯಕ್ತಿ ಚಾರಿತ್ರ್ಯದ ಮೂಲಕವೇ ರೂಪಿತವಾಗಬೇಕೆಂದರು. ತಮ್ಮನ್ನು ಎಂದೂ ದೊಡ್ಡವರು ಎಂದು ಕರೆದು ಕೊಳ್ಳಲಿಲ್ಲ ಹಾಗೆ ಭಾವಿಸಿದ್ದೂ ಇಲ್ಲ. ಸದಾ "ಎನಗಿಂತ ಕಿರಿಯರಿಲ್ಲ" ಎಂದೇ ನಡೆದುಕೊಂಡರು. ಯಾರನ್ನೇ ಮಾತನಾಡಿಸಿದರೂ ಅಣ್ಣಾ, ಅಯ್ಯಾ, ಅಪ್ಪಾ, ಅವ್ವಾ, ಅಕ್ಕಾ ಎಂದೇ ಕರೆದರು. ಶರಣು ಎಂದವರಿಗೆ ಶರಣು ಶರಣಾರ್ಥಿ ಎಂದು ಕೈ ಮುಗಿದರು. ರಾಜ ಬಿಜ್ಜಳನಿಗೆ ವಂದಿಸುವಾಗಲೂ ಒಂದೇ, ಹರಳಯ್ಯನಿಗೆ ವಂದಿಸುವಾಗಲೂ ಒಂದೇ ಮನೋಧರ್ಮ. ತಾನು ಕೈ ಹಿಡಿದ ಹೆಂಡತಿ ನೀಲಾಂಬಿಕೆಯಾಗಲೀ, ಗಂಗಾಂಬಿಕೆಯಾಗಲೀ, ಅಕ್ಕ ನಾಗಲಾಂಬಿಕೆಯಾಗಲೀ ಕೊಟ್ಟ ಸಲಹೆಯನ್ನು ಗೌರವದಿಂದಲೇ ಸ್ವೀಕರಿಸಿದರು. ಚೆನ್ನ ಬಸವಣ್ಣ ತನಗೆ ಸೋದರಳಿಯ. ಅವನು ತಪ್ಪು ತೋರಿದಾಗ ಅವನಿಗೂ ನಮಸ್ಕರಿಸಿದರು. ಪ್ರಭುದೇವ ಮುನಿದಾಗ ಕಾಲು ಹಿಡಿದರು. ಮಂತ್ರಿಯಾಗಿದ್ದಾಗ ಸಾರ್ವಜನಿಕ ಸಂಪತ್ತಿನ ಮೇಲೆ ಹದ್ದು ಕಣ್ಣಿಟ್ಟಿದ್ದರು. ಸರ್ಪಕಾವಲಾಗಿದ್ದರು. ಪಾಪಿಗಳನ್ನು ಪ್ರೀತಿಸಿದರು. ಮಾರ್ಗತೋರಿದರು. ಉದ್ಧಾರಮಾಡಿದರು. ಮನೆಗೆ ಬಂದ ಕಳ್ಳನನ್ನು ಸಂಗಮನಾಥನೆಂದರು. ತಾನೊಬ್ಬಕಳ್ಳ ತನ್ನ ಮನೆಗೆ ಬಂದವನೊಬ್ಬ ಬಲುಗಳ್ಳನೆಂದೇ ಸಂಬೋಧಿಸಿಕೊಂಡರು. ಗೋವುಗಳನ್ನು ಕಳ್ಳರು ಕದ್ದುಕೊಂಡು ಹೋದರೆಂದಾಗ ಕರುಗಳನ್ನು ಕಣ್ಣಿಬಿಚ್ಚಿ ಹೊಡೆಯಿಸಿದರು. ವೇದ ಉಪನಿಷತ್ತುಗಳನ್ನು ಪ್ರೀತಿಸಿದರು ಅವುಗಳನ್ನು ಸ್ವಾರ್ಥಕ್ಕಾಗಿ ಬಳಸಿದುದನ್ನು ಕಂಡು ಕಿಡಿಕಿಡಿಯಾದರು. ಅವುಗಳ ನಿಯಮಕ್ಕಿಂತಲೂ ಹೃದಯವಂತಿಕೆಗೆ ಬೆಲೆಕೊಟ್ಟರು. ವೇದಕ್ಕೆ ಒರೆಯನಿಕ್ಕುವೆನೆಂದರು. ಶಾಸ್ತ್ರಕ್ಕೆ ನಿಗಳವನಿಕ್ಕುವೆನೆಂದರು. ಪರಧನ, ಪರಸ್ತ್ರೀಗೆ ಅಂಜಿದರು. ಮಾದಾರ ಚನ್ನನನ್ನು ತನ್ನ ತಂದೆಯೆಂದು ಕರೆದುಕೊಂಡರು. "ಭಕ್ತಿಪಕ್ಷ"ವನ್ನು ಕಟ್ಟಿದರು. ಶಿವ ಬೆಳಕನ್ನು ಚೆಲ್ಲಿದರು. ಕನ್ನಡ ಭಾಷೆಗೆ ಕಸುವನ್ನು ತಂದುಕೊಟ್ಟರು. ಮನುಕುಲಕ್ಕೆ ಸಂವಿಧಾನವನ್ನು ರಚಿಸಿಟ್ಟರು. ಎಂದೂ ತಿದ್ದುಪಡಿಮಾಡಲಾಗದಂತಹ ಸಂವಿಧಾನವೆನ್ನಿಸಿದರು. ವಚನ ಸಾಹಿತ್ಯದಂಥ ಮತ್ತೊಂದು ಸಾಹಿತ್ಯ ಇಲ್ಲವೆನಿಸಿದರು. "ಎಮ್ಮ ವಚನದೊಂದು ಪಾರಾಯಣಕ್ಕೆ ವ್ಯಾಸರ ಪುರಾಣ ಸಮಬಾರದಯ್ಯಾ" ಎನ್ನಿಸಿದರು. "ರಾಮಾಯಣ ಮಹಾಭಾರತಗಳೇ ವಿದ್ಯೆಯಲ್ಲ" ಎಂದೂ ಹೇಳುವಂತಾಗಿಸಿದರು. ಹೊಲೆಯ ಮಾಡಿದ ಎಂಬ ಬಲೆಯ ಕಿತ್ತೊಗೆದರು. ರಾಜಸತ್ತೆ ಹಾಗೂ ಪುರೋಹಿತ ಸತ್ತೆಗಳನ್ನು ವಿರೋಧಿಸಿದರು. "ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬರಿಲ್ಲ" ಎಂದು ವಿಡಂಬಿಸಿದರು. "ಏನಯ್ಯಾ ವಿಪ್ರರು ನುಡಿದಂತೆ ನಡೆಯರು" –ಎಂದು ಕುಟಿಲತೆಯನ್ನು ಬಯಲಿಗೆಳೆದರು. ಭಕ್ತಿಯಿಲ್ಲದ ಬಡವ ತಾನೆಂದರು. ಬೇಡುವವರಿಲ್ಲದೆ ಬಡವಾದೆನೆಂದೂ ಅಂದರು. "ಅನ್ಯರಿಗೆ ಅಸಹ್ಯ ಪಡಬೇಡ" ವೆಂದರು. ಬಸವಣ್ಣ ಮನುಷ್ಯರನ್ನು ಪ್ರೀತಿಸಿದರು. ಜಂಗಮದ ಸೇವೆ ಗೈದರು. "ಮರ್ತ್ಯವನ್ನು ಕರ್ತಾರನ ಕಮ್ಮಟ"ವೆಂದು ಕರೆದರು. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರೆಂದರು, ಭರವಸೆಯನ್ನು ಕೊಟ್ಟರು. ನುಡಿ-ನಡೆ ಒಂದಾದರೆ ಇದೇ ಕಡೇಜನ್ಮವೆಂದರು.

ಬಸವಣ್ಣನವರ ಜಯಂತಿಯ ಸಂದರ್ಭದಲ್ಲಿ ನಮ್ಮನ್ನೊಮ್ಮೆ ಅವಲೋಕಿಸಿ ಕೊಳ್ಳುವ ಪ್ರಯತ್ನವಾದರೂ ನಮ್ಮದಾದೀತೇ ಎಂದು "ಸಿದ್ಧಗಂಗಾ" ಪ್ರಶ್ನಿಸುತ್ತದೆ.

## ಜ್ಞಾನ–ಗಂಗಾ

—ಎಮ್. ದಸ್ತಾಗಾರ್, ಶಹಪೂರಪೇಟೆ, ಗದಗ, ಧಾರವಾಡ ಜಿಲ್ಲೆ,

**ತ್ಯಾಗ**

ಅಧಿಕತ್ಯಾಗ ಮಾಡಿದವನು ಸ್ವರ್ಗಕ್ಕೆ ಹಾಗೂ ತ್ಯಾಗಹೀನತಾನು ನರಕದಲ್ಲಿ ಸ್ಥಾನ ಪಡೆಯುವನು ತ್ಯಾಗಿಗಾಗಿ ಯಾವುದು ಅಸಾಧ್ಯವಾದುದಿಲ್ಲ. ತ್ಯಾಗವು ಎಲ್ಲ ವಿಪತ್ತನ್ನೂ ದೂರ ಮಾಡುವುದು.

**ಕೈಗೊಂಬೆ**

ಸ್ತ್ರೀಯು ಪುರುಷನ ಕೈಗೊಂಬೆಯೆಂದು ಜನರು ಹೇಳುತ್ತಾರಾದರೂ ನಿಜದಾದದ್ದೆಂದರೆ, ಕೊನೆ-ಕೊನೆಗೆ ಪುರುಷನೇ ಸ್ತ್ರೀಯ ಕೈಗೊಂಬೆಯಾಗುತ್ತಾನೆ.

**ಅಳತೆಗೋಲು**

ಶ್ರೀಮಂತರದು ಒಂದೇ ಅಳತೆಗೋಲು. ಅವರು, ವಿದ್ಯೆ, ಸೌಂದರ್ಯ ಸಾಮರ್ಥ್ಯ, ಪವಿತ್ರತೆ, ಮತ್ತು ಹೃದಯವನ್ನು ಸಹ ಅವರು ಅದರಿಂದಲೇ ಅಳೆಯುತ್ತಾರೆ-ಅವರ ಅಳತೆಗೋಲು ಅಂದರೆ ಐಶ್ವರ್ಯ.

**ಸಜ್ಜನರ ಸಂಗ :**

ಒಬ್ಬ ದುಃಖ ಪೀಡಿತ ಪುರುಷನು ಸಜ್ಜನರ ಸಂಗದಿಂದ ಸುಖ–ಸಂತೋಷ ಗೊಳ್ಳುತ್ತಾನೆ.

ಸತ್ಯವೇ ತಪ, ಸತ್ಯವೇ ಜಪ, ಸತ್ಯದಿಂದಲೇ ಸಾಧಕನು ನಿಷ್ಪಾಪನಾಗುತ್ತಾನೆ.

# 'ದೇವರೆಡೆಗೆ ಭೌತಿಕ ವಿಜ್ಞಾನ'

ಮೂಲ:- ಸುಧಾಕರ್ ರಾಜ್ ಮೋಹನಗ, ದಹನುಕರ್‌ವಾಡಿ, ಬೊಂಬಾಯಿ–400 007

ಅನುವಾದ:- ಎಚ್. ಎಂ. ಕೋಳಿವಾಡ, ಕಲ್ಯಾಣನಗರ, ಧಾರವಾಡ-580007

ನಾಸ್ತಿಕರು, ನಿರೀಶ್ವರವಾದಿಗಳು ಹಾಗೂ ತಾರ್ಕಿಕರು ದೇವರನ್ನು ನಿರಾಕರಿಸುತ್ತಾರೆ ವೈಜ್ಞಾನಿಕವಾಗಿ ಪರಮಾತ್ಮನನ್ನು ಪ್ರಮಾಣಿಸಲಾಗದು ಎಂಬುದು ಅವರ ಮತ. ದೈವತ್ವ ಅಂತಃಜ್ಞಾನಕ್ಕೆ ಅಂತಃಸ್ಫೂರ್ತಿಗೆ ಸಂಬಂಧಿಸಿದ್ದು. ಭೌತಿಕ ವಿಜ್ಞಾನದ ಯಾವದೇ ತತ್ವಕ್ಕೆ ಅದು ಅನುರೂಪವಾಗದು ಎಂದು ಅವರ ಅಭಿಪ್ರಾಯ ಆದರೆ ಭೌತಿಕ ವಿಜ್ಞಾನದ ಪ್ರಯಾಣ ಸಾಗಿರುವದೆತ್ತ ? ಕಳೆದ ಅರ್ಧ ಶತಮಾನದಲ್ಲಿ ಮೇರು ಪರ್ವತಕ್ಕೂ ಮಿಗಿಲಾಗಿ ಸಾಧಿಸಿರುವ ವಿಜ್ಞಾನದ ಪ್ರಗತಿಯನ್ನು ಅದರಲ್ಲೂ ಭೌತಿಕ ವಿಜ್ಞಾನದ ಪ್ರಗತಿಯನ್ನು ಗಮನಿಸಿದಾಗ ದೈವತ್ವವನ್ನು ಅರಿಯಲು, ಅನು-ಭವಿಸಲು ಅನ್ವೇಷಣೆ ನಡೆಸಿದ ನಮ್ಮ ಪುರಾತನ ದಾರ್ಶನಿಕರು. ಸಹಸ್ರಾರು ವರ್ಷಗಳ ನಂತರ ಭೌತಿಕ ವಿಜ್ಞಾನ ಯಾವ ದಿಶೆಯಲ್ಲಿ ಸಾಗುವದು ಎಂಬುದನ್ನು ಎಷ್ಟು ಖಚಿತವಾಗಿ ಸೂಚಿಸಿರುವರಲ್ಲಾ ಎಂದು ಆಶ್ಚರ್ಯವಾಗುತ್ತದೆ. ಅವರು ದೇವರನ್ನು ಸರ್ವತೋಮುಖವಾದ ಪ್ರಜ್ಞೆ-ಪರಮಾತ್ಮ ಎಂದು ಕರೆದರು. ಅಂತಃ ಪ್ರಜ್ಞೆಯನ್ನಾಧರಿಸಿ ಅವರು ಪರಮಾತ್ಮನ ಅನ್ವೇಷಣೆ ನಡೆಸಿದರು. ನಮ್ಮನ್ನು ಆವರಿಸಿದ ಗೋಚರ ಹಾಗೂ ಆ ಕಲ್ಪನೆಗೆ ಒಳಗಾಗುವ ವಸ್ತುಸ್ಥಿತಿಯನ್ನು ಒಂದು ಮಾಯೆ ಎಂದೂ ಈ ಮಾಯೆಯ ಗರ್ಭದಲ್ಲಿ ನಿಜವಾದ ಸತ್ಯ ಅಡಗಿದೆ ಎಂದರು.

## ಬ್ರಹ್ಮಸತ್ಯಂ ಜಗತ್ ಮಿಥ್ಯಂ

ಎರಡು ಶತಮಾನಗಳ ಪೂರ್ವದ ನ್ಯೂಟನ್‌ನ ಭೌತಿಕ ವಿಜ್ಞಾನದಲ್ಲಿ ಇಂತಹ ದ್ವಿರೂಪಕ್ಕೆ ಅವಕಾಶವಿರಲಿಲ್ಲ. ಗುರುತ್ವಾಕರ್ಷಣ ಚಲನೆ (Motion) ಮುಂತಾದ ನಿರ್ದಿಷ್ಟ ನಿಯಮಗಳಿಗನುಸರಿಸಿ ಚಲಿಸುವ ಒಂದು ಬೃಹತ್ ಯಂತ್ರ ಈ ವಿಶ್ವ ಎಂದೂ ಉಳಿದುದೆಲ್ಲ ಕುರುಡುಗತಿಯಿಂದ ಸಾಗಿರುವ ಈ ಯಂತ್ರದ ಚಕ್ರದ ಹಲ್ಲುಗಳೆಂಬ ಕಲ್ಪನೆ ಇತ್ತು. ತಾರ್ಕಿಕವಾದ ಸುನಿಶ್ಚಿತ ನಿಯಮಗಳಿಗೆ ಈ ಜಗತ್ತು ಒಳಪಟ್ಟಿದೆ ಎಂಬುದು ನ್ಯೂಟನ್‌ನ ಭೌತಿಕ ವಿಜ್ಞಾನದ ಪರಿಕಲ್ಪನೆ.

ಆದರೆ, ಸತ್ಯದ (Reality) ಸತ್ಯವಾದ (True) ಅರಿವು ತಾರ್ಕಿಕ ಜ್ಞಾನದ ಬಂಧನಕ್ಕೆ ಸೀಮಿತವಾಗಿಲ್ಲ ಎಂದು ಇತ್ತೀಚಿಗಿನ ಪರಿಷ್ಕೃತ ಪರಿಶೋಧನೆಗಳಾದ ಪಾರ್ಟಿಕಲ್ ಫಿಜಿಕ್ಸ್ (Particle physics) ಮತ್ತು ಕ್ವಾಂಟಂ ಮೆಕೆನಿಕ್ಸ್ (Quantum mechanics) ಸುನಿಶ್ಚಿತವಾಗಿ ಬೋಧಿಸುತ್ತಿವೆ. ಇದಕ್ಕೆ ವಿಪರೀತವಾದ ದಿಶೆಯಲ್ಲಿ ನಾವು ಗೋಚರ (Apparent) ವಾದುದನ್ನು ಸತ್ಯವೆಂದು ತಿಳಿಯುತ್ತೇವೆ. ಯಾವುದನ್ನು ಸತ್ಯವೆಂದು ಸ್ವೀಕರಿಸುತ್ತೇವೆಯೊ ಅದನ್ನು ನಂಬುತ್ತೇವೆ. ನಮ್ಮ ನಂಬುಗೆ ನಮ್ಮ ಗ್ರಾಹ್ಯ ಶಕ್ತಿಯನ್ನು ಅವಲಂಬಿಸಿದೆ. ಯಾವದನ್ನು ಗ್ರಹಿಸುತ್ತೇವೆಯೊ ಅದು ನಾವು ಏನನ್ನು ಶೋಧಿಸುತ್ತಿದ್ದೇವೆ ಎಂಬುದನ್ನು ಅವಲಂಬಿಸಿದೆ.

ನಾವು ಏನನ್ನು ಶೋಧಿಸುತ್ತಿದ್ದೇವೆ ಎಂಬುದು ನಾವು ಏನನ್ನು ಕುರಿತು ಚಿಂತಿಸುತ್ತಿದ್ದೇವೆ (think) ಎಂಬುದನ್ನು ಅವಲಂಬಿಸಿದೆ. ಏನನ್ನು ಕುರಿತುನಾವು ಚಿಂತಿಸುತ್ತಿದ್ದೇವೆ ಎಂಬುದು ನಾವು ಯಾವುದನ್ನು ಗ್ರಹಿಸುತ್ತಿದ್ದೇವೆ ಎಂಬುದನ್ನು ಆಧರಿಸಿದೆ. ಯಾವುದನ್ನು ನಾವು ಗ್ರಹಿಸುತ್ತೇವೆಯೋ ಅದು ನಮ್ಮ ನಂಬಿಗೆಯನ್ನು ನಿಶ್ಚಯಿಸುತ್ತದೆ. ಯಾವುದನ್ನು ನಂಬುತ್ತೇವೆಯೋ ಅದು ನಮಗೆ ಸತ್ಯ ಯಾವುದು ನಮಗೆ ಸತ್ಯವೊ ಅದು ನಮಗೆ ವಾಸ್ತವವಾದದ್ದು (reality) ಹೇಗೆ ನಾವು ವರ್ತುಲಾಕಾರದಲ್ಲಿ ಮರಳಿ ಆರಂಭಿಸಿದ ಸ್ಥಳಕ್ಕೇ ಬರುತ್ತೇವೆ. ಸ್ವೀಕಾರಯೋಗ್ಯವಾದ ಸತ್ಯ ಸ್ವಾನುಭವದ ಜ್ಞಾನವನ್ನು ಆಧರಿಸಿದೆ.

'ಬೆಲ್ಲ' ನ ಸಿದ್ಧಾಂತ (Bell's theoram) ಹಾಗೂ 'ಬೊಮ'ನ ಥೀರಿ (Bohm's theory)ಗಳಿಂದಾಗಿ ವೈಜ್ಞಾನಿಕ ಸತ್ಯದ ಪರಿಕಲ್ಪನೆಯಲ್ಲಿ ಬಹಳಷ್ಟು ಪರಿಶೋಧನೆಯಾಗಿದೆ. ಸ್ವಿಟ್ಜರ್‌ಲ್ಯಾಂಡಿನ ಯುರೋಪಿಯನ ಆರ್ಗನೈಜೇಶನ್ ಫಾರಂ ನ್ಯೂಕ್ಲಿಯರ ರಿಸರ್ಚ ಸಂಸ್ಥೆಯಲ್ಲಿ ಭೌತಿಕ ವಿಜ್ಞಾನಿ (Physicist) ಆದ "ಜೆ.ಎಸ್. ಬೆಲ್ಲ" 1964 ರಲ್ಲಿ ಮೆಥಮೆಟಿಕಲ್ ಪೇಪರ್ ಒಂದನ್ನು ಪ್ರಕಟಿಸಿದನು. ಅದು ಮುಂದೆ 'ಬೆಲ್ಸಿಥೇರಂ' ಎಂದು ಪ್ರಸಿದ್ಧಿ ಪಡೆಯಿತು. ವಿಶ್ವದ ಬಿಡಿ ಅಂಗಗಳು (Seperate parts of Universe) ಆಳವಾದ ಮತ್ತು ಮೂಲಭೂತ ಸ್ತರದಲ್ಲಿ ಅನ್ಯೋನ್ಯವಾದ ನೇರ ನೆಂಟಸ್ತಿಕೆ ಹೊಂದಿರುತ್ತವೆ ಎಂಬುದನ್ನು 'ಬೆಲ್ಸ, ಥೇರಂ ಬೋಧಿಸುತ್ತದೆ. ಭೌತಿಕ ವಿಜ್ಞಾನದ ಇತಿಹಾಸದಲ್ಲಿಯೇ ಬೆಲ್ಸಥೇರಂ ಅದ್ವಿತೀಯವಾದ ಏಕೈಕ ರಚನೆ ಎಂದು ಕೆಲ ವಿಜ್ಞಾನಿಗಳು ಅಭಿಪ್ರಾಯ ಪಟ್ಟಿದ್ದಾರೆ. ಐಕ್ಯತೆಯ ಈ ಬೋಧೆ ಸರ್ವಾಂತರ್ಯಾಮಿ ಪರಮಾತ್ಮನೊಂದಿಗೆ ವಿಲೀನವಾಗುವ ದಿವ್ಯ ಅನುಭವಕ್ಕೆ ಸರಿಸಮಾನವಾಗಿದೆ.

ಪರಮ ಪರಮಾಣು ಕಣಗಳ (Sub-atomic particles) ವರ್ತನೆಯನ್ನು ಬಣ್ಣಿಸಲು ಸಾಮಾನ್ಯ ವಿಚಾರ ವೈಖರಿ (Commonsense ideas) ಸಾಲದೆಂದು 1920 ರಲ್ಲಿಯೇ ಕ್ವಾಂಟಂ ಭೌತಿಜ್ಞರು ಕಂಡು ಕೊಂಡಿದ್ದರು. ಜಾಗತಿಕ ದೈನಂದಿನ ಬಹೃತ್ ಘಟನೆಗಳನ್ನು ( Macroscopic events of our every day world) ಕೂಡ ಶಬ್ದಗಳಲ್ಲಿ ಸೆರೆ ಹಿಡಿಯಲು ಸಾಮಾನ್ಯ ವಿಚಾರ (Commonsense ideas) ಸರಣಿಗಳಿಂದಾಗದು ಎಂದು " ಬೆಲ್ಸಥೇರಂ " ತೋರಿಸುತ್ತದೆ. ಲಾರೆನ್ಸ್ ಬರ್ಕಲಿ ಲೆಬೆರೋಟರಿಯ ಭೌತಿಕ ವಿಜ್ಞಾನಿ ಹೆನ್ರಿ ಸ್ಟ್ಯಾಪ್ ಹೀಗೆ ಹೇಳಿದ್ದಾನೆ. ಬೆಲ್ಸಥೇರಂನ ಪ್ರಾಮುಖ್ಯತೆ ಎಂದರೆ ಅದು ಕ್ವಾಂಟಂ ಫೆನೊಮಿನ (quantam Phenomena) ಮುಂದೊಡ್ಡಿದ ಚಿಂತನೆಗಳನ್ನೆಲ್ಲ ಬೃಹತ್ ಘಟನೆಗಳ ರಾಜ್ಯಕ್ಕೆ (Macroscopic Phenomena) ತಳ್ಳುತ್ತದೆ. ಅಂದರೆ ವಿಶ್ವದ ಬಗೆಗಿರುವ ನಿಮ್ಮ ಸಾಮಾನ್ಯ ವಿಚಾರಗಳು ಬೃಹತ್‌ಸ್ತರದಲ್ಲಿ ಕೂಡ



(Macroscopic level) ಅಸಮರ್ಪಕವಾಗಿವೆ ಎಂಬುದನ್ನು ಅದು ತೋರಿಸುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ ಸಬ್ ಎಟೊಮಿಕ ರಿಯಾಲಿಟಿ ಮತ್ತು ಮ್ಯಾಕ್ರೊಸ್ಕೊಪಿಕ ಯುನಿವರ್ಸಲ್ ರಿಯಾಲಿಟಿ ಎರಡೂ ಸಾಮಾನ್ಯವಾಗಿ ಅಗಮ್ಯವಾಗಿವೆ ಸಹಜವಾಗಿ ಅರ್ಥಮಾಡಿಕೊಳ್ಳಲಾಗದಷ್ಟು ಗಹನವಾಗಿವೆ.

### ಯತ್ ಪಿಂಡೇ ತತ್ ಬ್ರಹ್ಮಾಂಡೆ

ಲಂಡನ್ ಯುನಿವರ್ಸಿಟಿಯ ಬರಬೆಕ ಕಾಲೇಜಿನಲ್ಲಿ ಭೌತಿಕ ವಿಜ್ಞಾನದ ಪ್ರಾಚಾರ್ಯನಾದ "ಡೆವಿಡ್ ಬೊಮ" ಹೀಗೆ ಹೇಳುತ್ತಾನೆ, "ಕ್ವಾಂಟಂ ಫಿಜಿಕ್ಸಿನ ಸತ್ಯಾಂಶವೆಂದರೆ ಅದು ಗ್ರಹಿಕೆಯ (Perception) ಹೊಸ ಕ್ರಮವನ್ನು ಆಧರಿಸಿದೆ" ಬೊಮನ ಅನುಸಾರ ಭೌತಿಕ ವಿಜ್ಞಾನವನ್ನು ತಿರುಗು ಮುರುಗಾಗಿಸಿ, ಖಂಡಗಳಿಂದ (Parts) ಪ್ರಾರಂಭಿಸಿ ಅವುಗಳಲ್ಲಿ ಹೇಗೆ ಒಟ್ಟಿಗೆ ಕಾರ್ಯನಿರ್ವಹಿಸುತ್ತದೆ ಎಂಬುದನ್ನು ತೋರಿಸುವ ಬದಲು ಅಖಂಡದಿಂದ ಆರಂಭಿಸಬೇಕು. ಬೇರೆ ಶಬ್ದಗಳಲ್ಲಿ ಹೇಳುವುದಾದರೆ ಈ ವಿಶ್ವ ಐಕ್ಯತೆಯ ಬೀಡು ಎಂಬುದನ್ನು ಸ್ವೀಕರಿಸಿದ ನೆಲೆಯ ಮೇಲೆ ಕ್ವಾಂಟಂ ಫಿಜಿಕ್ಸ್ ಆಧರಿಸಿದೆ. 'ಎಲ್ಲವೂ ನನ್ನಿಂದಲೇ ಉದ್ಭವಿಸಿದೆ ಮತ್ತು ನನ್ನಲ್ಲಿಯೇ ಲೀನವಾಗುತ್ತದೆ' ಎಂದು ಶ್ರೀ ಕೃಷ್ಣ ಗೀತೆಯಲ್ಲಿ ಬಹು ಸುಂದರವಾಗಿ ಹಾಗು ಸರಳವಾಗಿ ಈ ಐಕ್ಯತೆಯನ್ನು ಬಣ್ಣಿಸಿದ್ದಾನೆ. ಸೃಷ್ಟಿಯ ಉಗಮದ ಸ್ತೋತ್ರ ಅವನೆ ಅಲ್ಲವೆ!

ಬೊಮನ ಥಿಯರಿ ಹಾಗೂ ಬೆಲ್ಲನ ಥೇರಂನಲ್ಲಿ ಹೊಂದಾಣಿಕೆ ಇದೆ. ಬಿಡಿಯಾಗಿ ತೋರುವ ವಿಶ್ವದ ಅಂಗಗಳು (Seperate-parts) ಆಳವಾದ ಮೂಲಭೂತ ಸ್ತರದಲ್ಲಿ ಒಂದಕ್ಕೊಂದು ಅನ್ಯೋನ್ಯವಾಗಿ ಬೆಸೆಯಲ್ಪಟ್ಟಿವೆ ಎಂದು ಬೆಲ್ಲ ಹೇಳುತ್ತಾನೆ. ಮೂಲ ಸ್ತರದಲ್ಲಿ ಈ ಬ್ರಹ್ಮಾಂಡ ಅವಿಚ್ಛಿನ್ನವಾದ ಅಖಂಡತೆಯಿಂದೊಡಗೂಡಿದೆ ಎಂದು ಬೋಮ ನುಡಿಯುತ್ತಾನೆ. ಈ ಅಖಂಡತೆಯನ್ನು ಬೊಮ ದಟ್ ವಿಚ್ ಇಜ್ (That-which-is) ಎಂದು ಕರೆದಿದ್ದಾನೆ **ಇದನ್ನೇ ನಮ್ಮ ಋಷಿಗಳು ತತ್-ತ್ವಂ ಎಂದು ಹೆಸರಿಸಿಲ್ಲವೆ !** ಬೊಮನ ವಿಜ್ಞಾನಕ್ಕೆ ಅವನೇ ಹೇಳುವಂತೆ ಒಂದು ಹೊಸ ರೀತಿಯ ಚಿಂತನೆಯ ಸಾಧನ (a new Instrument of hought) ಬೇಕು. ಈಹೊಸ ಸಾಧನ ನಿರೀಕ್ಷಕನ ಅರಿವನ್ನು (Consciousness) ಮೂಲ್ಯವಾಗಿ ಪರಿವರ್ತಿಸಿ ಅಖಂಡತೆಯ (Wholeness) ಪ್ರಜ್ಞೆಯನ್ನು ಮೂಡಿಸುತ್ತದೆ, ಹಾಗೂ ಮತ್ತೆಲ್ಲವೂ ಈ ಅಖಂಡತೆಯ ಸ್ವರೂಪವೇ ಎಂಬುದನ್ನು ಮನಗಾಣಿಸುತ್ತದೆ. ಈ ತರಹದ ವಿಚಾರಗಳು ನಮ್ಮ ದೇಶಕ್ಕೆ ಹೊಸತಾದವಲ್ಲ. ಆದರೆ ಪಾಶ್ಚಿಮಾತ್ಯರಿಗೆ ಇಂತಹ ಕಲ್ಪನೆಗಳು ಸುಲಭವಾಗಿ ಅರಗುವವಲ್ಲ. ಪೂರ್ಣವಾದುದು ಪೂರ್ಣತೆಯನ್ನು ತ್ಯಜಿಸಿದಾಗಲೂ ಪೂರ್ಣವಾಗಿಯೇ ಉಳಿಯುತ್ತದೆ. ಎಂಬುದನ್ನು ನಾವು ಎಂದೋ ತಿಳಿದು ಕೊಂಡಿದ್ದೇವೆ

ಓಂ, ಪೂರ್ಣಂ ಅದಃ ಪೂರ್ಣಂ ಇದಂ
ಪೂರ್ಣಾತ್ ಪೂರ್ಣಂ ಉದಚ್ಯತೆ
ಪೂರ್ಣಸ್ಯ ಪೂರ್ಣಂ ಆದಾಯ
ಪೂರ್ಣಂ ಏವ ಅವಶಿಷ್ಯತೆ.

"ದಿ ಡಾನ್ಸಿಂಗ್ ವು ಲಿ ಮಾಸ್ಟರ್ಸ್ ಎನ್ಒವ್ಹರ್ ವ್ಯೂ ಆಫ್ ನ್ಯೂ ಫಿಜಿಕ್ಸ್" (The dancing wu li masters: an over riew of new physics) ಎಂಬ ಮನಮೋಹಿಸುವ ತನ್ನ ಪುಸ್ತಕದಲ್ಲಿ "ಗೆರಿ ಝುಕಾವ" ಹೀಗೆ ಹೇಳಿದ್ದಾನೆ: ಅಭಿನ್ನ ಅಖಂಡತೆಯನ್ನು (Unbrokan wholeness) ಆಧರಿಸಿರುವ ವೈಚಾರಿಕ ಸಾಧನ ಒಂದು ಈ ಮೊದಲೇ ಅಸ್ತಿತ್ವದಲ್ಲಿದೆ. ಸಹಸ್ರಾರು ವರ್ಷಗಳ ಸತತಾಭ್ಯಾಸ ಮತು ಆತ್ಮ ನಿರೀಕ್ಷಣೆಯ ಫಲವಾಗಿ ಉದ್ಭವಿಸಿದ ತತ್ವಶಾಸ್ತ್ರ, ಮನಶಾಸ್ತ್ರಗಳ ಉದ್ದೇಶವೇ ಈ ವೈಚಾರಿಕ ಸಾಧನದ ನಿರ್ಮಾಣವಾಗಿದೆ. ಈ ಮನಶಾಸ್ತ್ರಗಳನ್ನು ನಾವು ಪೌರ್ವಾತ್ಯ ಧರ್ಮಗಳೆಂದು ಕರೆಯುತ್ತೇವೆ. ಎಲ್ಲ ಪೌರ್ವಾತ್ಯ ಧರ್ಮಗಳು ಬೊಮನ ಭೌತಿಕ ವಿಜ್ಞಾನ ಮತ್ತು ಅವನ ತತ್ವಗಳಿಗನುಸಾರವಾಗಿವೆ. ಈ ಎಲ್ಲಾ ಪೌರ್ವಾತ್ಯ ಶಾಸ್ತ್ರಗಳು ಪರಿಶುದ್ಧ ಅನುಭವಜನ್ಯ ಜ್ಞಾನದಿಂದ "ತತ್-ತ್ವಂ" That which is ಎಂಬ ಸತ್ಯವನ್ನು ಅರಿತಿವೆ."

ಪೌರ್ವಾತ್ಯ ಧರ್ಮಗಳು ಎಂದು ಝುಕಾವ ಹೇಳುವದು ಹಿಂದೂ ಹಾಗೂ ಬೌದ್ಧ ಧರ್ಮಗಳಿಗೆ. ಬೊಮನ ಭೌತಿಕ ವಿಜ್ಞಾನಕ್ಕೂ ಈ ಧರ್ಮಗಳಿಗೂ ಇರುವ ಸಾಮ್ಯವನ್ನು ಅಲ್ಲಗಳೆಯುವದು ಮೂರ್ಖತನವೆಂದೂ ಅವನು ಹೇಳುತ್ತಾನೆ. ಉದಾಹರಣೆಗಾಗಿ ಈ ಕೆಳಗಿನ ಪಂಕ್ತಿಗಳನ್ನು ಉದ್ಧರಿಸುತ್ತಾನೆ.

"ರಿಯಾಲಿಟಿ (Reality) ಎಂಬ ಶಬ್ದ ಥಿಂಗ್ (Res) ಮತ್ತು ಥಿಂಕ್ (Reri) ವಸ್ತು ಮತ್ತು ವಿಚಾರ ಎಂಬ ಮೂಲಧಾತು (Roots)ಗಳಿಂದ ಬಂದಂತಹುದು. ರಿಯಾಲಿಟಿಯ ಅರ್ಥ ವೈಚಾರಿಕ ವಿಶಾಲತೆಗೆ ನಿಲುಕುವ ಎಲ್ಲವೂ ಎಂದು Every thing you can think a boil."

"ಮಿದುಳಿನಿಂದಾಗಲಿ ಅಥವಾ ಯಾವದೇ ವಸ್ತುವಿನ ರಚನೆಯಲ್ಲಾಗಲಿ ಅಂತಿಮ ಗ್ರಹಿಕೆ (Ultimate pereeption) ಉದ್ಭವಿಸುವದಿಲ್ಲ. ಸತ್ಯದ ತಿಳಿವಿನ ಸೂಕ್ಷ್ಮಕ್ರಿಯೆ ಮಿದುಳಿನ ಮಡಿಲಿನಿಂದ ಜನಿಸುವದಿಲ್ಲ."

"ವಸ್ತು ಮತ್ತು ವಿಚಾರ (matter and thought) ಗಳ ಮಧ್ಯೆ ಸಾದೃಶ್ಯತೆ ಇದೆ.



ಸಂದರ್ಭದಿಂದ ಸರಿಸಿ ನೋಡಿದಾಗ ಮೇಲಿನ ಮಾತುಗಳು ಪ್ರೊ. ಬೊಮನವೇ ಅಥವಾ ತಿಬೇಟಿನ ಲಾಮಾನ ಮಾತುಗಳೇ ಎಂಬುದನ್ನು ತಿಳಿಯುವದು ದುಸ್ತರವಾಗುತ್ತದೆ ಎಂದು ಝುಕಾವ ಹೇಳುತ್ತಾನೆ. ಹಾಗೆ ಬೇರ್ಪಡಿಸಲು ನಿಖರವಾದ ಯಾವ ದಾರಿಯೂ ಇಲ್ಲ. ವಾಸ್ತಾವವಾಗಿ ಈ ವಾಕ್ಯಗಳನ್ನು 1977ರಲ್ಲಿ ಬರ್ಕಲಿಯಲ್ಲಿ ವಿಜ್ಞಾನ ಕುರಿತು ಬೊಮ ಮಾಡಿದ ಎರಡು ವ್ಯಾಖ್ಯಾನಗಳಿಂದ ಆರಿಸಲ್ಪಟ್ಟಿವೆ. ಮೂರರಲ್ಲಿ ಎರಡು ವಾಕ್ಯಗಳನ್ನು ಉಚ್ಚಸ್ತರದ ವಿಜ್ಞಾನಿಗಳಿಗಾಗಿ ನೀಡಿದ ಭಾಷಣದಿಂದ ಆಯ್ದವಾಗಿವೆ.

ಎಲ್ಲ ಪೌರ್ವಾತ್ಯ ಧರ್ಮಗಳಂತೆ ಹಿಂದೂ ಧರ್ಮಕೂಡ ಸಂಕೇತಗಳನ್ನು ಬಳಸಿಕೊಂಡಿದೆ. ಆದರೆ ಈ ಸಂಕೇತಗಳ ಸಂಕೋಲೆಗಳಿಂದ ನಮ್ಮ ಮನಸ್ಸನ್ನು ಮುಕ್ತಗೊಳಿಸುವದೇ ಅದರ ಕ್ರಿಯಾಶೀಲತೆಯೂ ಆಗಿದೆ.

ಈ ವಿಚಾರ ಧಾರೆಗನುಸರಿಸಿ ಸಕಲವೂ ಸಾಂಕೇತಿವೇ ಆಗಿದೆ. ಶಬ್ದಗಳು ಗ್ರಹಿಕೆಗಳು ಅಷ್ಟೇ ಅಲ್ಲ ಜನರು ಮತ್ತು ಎಲ್ಲ ವಸ್ತುಗಳು ಸಾಂಕೇತಿಕವೇ. ಸಾಂಕೇತಿಕ ದಿಗ್ಬಂಧನದಾಚೆಗಿದೆ. ಪರಿಶುದ್ಧ ಅರಿವು, ತಿಳಿವಳಿಕೆ, ಜ್ಞಾನ, ಯಥಾವಸ್ತಿನ ದಿವ್ಯಾನುಭವ ಅನೇಕ ವಿಜ್ಞಾನಿಗಳು ಬೊಮನ ವಿಚಾರಗಳನ್ನು ಸಂದೇಹಾತ್ಮಕವಾಗಿ ನೋಡಿದರೂ, ಪಾಶ್ಚಿಮಾತ್ಯ ವಸ್ತುವಾದದಿಂದ ಪರಿವರ್ತನೆ, ವೈಯಕ್ತಿಕವಾಗಿ ಅಂತಿಮ ಸತ್ಯದ ಅನ್ವೇಷಣೆಗೆ ಮೊರೆ ಹೊಕ್ಕ ಅನೇಕ ವಿಜ್ಞಾನಿಗಳು ಅವನ ವಿಚಾರಗಳತ್ತ ಬಲವಾಗಿ ಆಕರ್ಷಿತರಾಗಿದ್ದಾರೆ, ಸಹಾನುಭೂತಿಪರರಾಗಿದ್ದಾರೆ. ಬೊಮನ ಪ್ರತಿಪಾದನೆಗೆ ವೈಜ್ಞಾನಿಕ ವಲಯದಲ್ಲಿ ಪ್ರಾಮುಖ್ಯತೆ ದೊರೆತಲ್ಲಿ 21ನೇ ಶತಮಾನದ ಭೌತಿಕ ವಿಜ್ಞಾನದ ಪಠ್ಯಕ್ರಮದಲ್ಲಿ ಯೋಗಾಭ್ಯಾಸವನ್ನು ಕಡ್ಡಾಯವಾಗಿ ಸೇರಿಸಬಹುದೆಂದು ಝುಕಾವ ಹೇಳುತ್ತಾನೆ, ಇಪ್ಪತ್ತೊಂದು ಶತಮಾನಗಳ ಹಿಂದೆ ಹಾಗೂ ಅದಕ್ಕೂ ಪೂರ್ವದಲ್ಲಿ ನಮ್ಮ ದಾರ್ಶನಿಕರು, ಋಷಿಗಳು ಕೈಗೊಂಡ ಕಾರ್ಯಗಳತ್ತ, ಅನ್ವೇಷಣೆಗಳತ್ತ, ಬರಲಿರುವ ಇಪ್ಪತ್ತೊಂದನೆಯ ಶತಮಾನದಲ್ಲಿ ಭೌತಿಕ ವಿಜ್ಞಾನಿಗಳು ಸಾಗಬಹುದು.

ಆಧುನಿಕ ವಿಜ್ಞಾನದ ಮೇರೆಗಳು ವಿಸ್ತರಿಸುತ್ತಿವೆ. ನ್ಯೂಟನ್ ಪ್ರತಿಪಾದಿಸಿದ ಕಾಠಿಣ್ಯದ ಸ್ಥಾನವನ್ನು ಅತಿಯಾದ ಮುಕ್ತತೆ (Extream openness) ಆದರಿಸಿದೆ ಕೊಲಂಬಿಯಾ ಯುನಿವರ್ಸಿಟಿಯ ಭೌತಿಕ ವಿಜ್ಞಾನ ವಿಭಾಗದ ಛೇರಮನ್ ಎಮಿರಿಟಸ್ ಮತ್ತು ನೊಬೆಲ್ ಪುರಸ್ಕಾರ ಪಡೆದ "ಇಜಿಡೊರ ರಾಬಿ" 1975 ರಲ್ಲಿ ಹೀಗೆ ಹೇಳಿದ್ದಾರೆ. "ಭೌತಿಕ ವಿಜ್ಞಾನಕ್ಕೆ ಅಂತ್ಯ ಬಂದಿದೆ ಎಂದು ನನಗನ್ನಿಸುವದಿಲ್ಲ. ನಿಸರ್ಗದ ನವೀನ್ಯತೆಯ ಕಾರಣದಿಂದ ವಿವಿಧತೆ, ರೂಪವನ್ನು

ಬದಲಾಯಿಸುವದರಲ್ಲಿ ಮಾತ್ರವಲ್ಲ ಒಳನೋಟದ ಆಗಾಧತೆಯಲ್ಲಿ ಮತ್ತು ನೂತನ ಕಲ್ಪನೆಗಳಲ್ಲಿ ಅನಂತವಾಗಿದೆ." 1971 ರಲ್ಲಿ "ಸ್ಟಾಪ್" ಹೇಳಿದ್ದಾರೆ. "ಘನವಾದ (important) ವಿನೂತನ ಸತ್ಯ ಪ್ರಾಪ್ತಿಗಾಗಿ ಮಾನವನ ಪ್ರಯಾಸ ಅನಿಶ್ಚಿತವಾಗಿ ಮುಂದುವರೆಯಬಹುದು." ಮನುಷ್ಯನ ಅನುಭವಗಳಂತೆ ಭೌತಿಕ ವಿಜ್ಞಾನದ ಸ್ವರೂಪವೂ ವೈವಿಧ್ಯಗಳಿಂದ ಕೂಡಿದೆ ಎಂಬುದನ್ನು ವಿಜ್ಞಾನಿಗಳು ಇಂದು ಸ್ವೀಕರಿಸಿದ್ದಾರೆ.

ಹಿಂದೂ ಧರ್ಮ ಅಥವಾ ಪೌರ್ವಾತ್ಯ ಧರ್ಮ–ಭೌತಿಕ ವಿಜ್ಞಾನದ ಬಗೆಗೆ ಏನನ್ನೂ ಹೇಳದಿರಬಹುದು. ಆದರೆ ಅದು ಮಾನವನ ಅನುಭವಗಳ ಬಗೆಗೆ ಬಹಳಷ್ಟು ಹೇಳಿದೆ. ಹಿಂದೂ ವಿವೇಕಕ್ಕೆ ತುಸು ವಿಜಾತೀಯವಾಗಿ ತೋರಬಹುದಾದರೂ, ಸಶಕ್ತವಾದ ಶಬ್ದಗಳಲ್ಲಿ ಗೆರಿ ಝುಕಾವ ತನ್ನ ರೋಚಕ ಪುಸ್ತಕ ‹‹ ದಿ ಡಾನ್ಸಿಂಗಾ ವು ಲಿ ಮಾಸ್ಟರ್ಸ್'ದ ಕೊನೆಯ ಅಧ್ಯಾಯ ‹‹ ದಿ ಎಂಡ್ ಆಫ್ ಸಯಿನ್ಸ್'ದಲ್ಲಿ ಹೀಗೆ ಹೇಳಿದ್ದಾನೆ. ‹‹ ಹಿಂದೂ ಪುರಾಣಗಳಲ್ಲಿ ದೇವಿ, ಕಾಳಿ, ಮಾತೆ ಅನಂತ ವೈವಿಧ್ಯಮಯ ಅನುಭವಗಳ ಸಂಕೇತವಾಗಿದ್ದಾಳೆ. ಸಮಸ್ತ ಭೌತಿಕ ಸ್ತರವನ್ನು ಅವಳು ಪ್ರತಿನಿಧಿಸುತ್ತಾಳೆ. ಜೀವನದ ನಾಟಕದಲ್ಲಿ ರೌದ್ರ, ಹಾಸ್ಯ, ಸುಖ, ದುಃಖ ಎಲ್ಲವೂ ಅವಳಾಗಿದ್ದಾಳೆ. ತಂದೆ, ತಾಯಿ, ಸೋದರ, ಸೋದರಿ, ಪ್ರೇಮಿ ಹಾಗೂ ಮಿತ್ರ ಎಲ್ಲವೂ ಅವಳೇ. ಅವಳು ಕುರೂಪಿ, ಪಿಶಾಚಿನಿ, ನಿಷ್ಕರುಣಿ, ಪಶು, ಅವಳು ಸೂರ್ಯನೂ ಅಹುದು ಸಮುದ್ರವೂ ಅಹುದು. ಹುಲ್ಲೂ ಅವಳೇ. ಹುಲ್ಲಿನ ಮೇಲಿನ ಇಬ್ಬನಿಯ ಹನಿಯೂ ಅವಳೇ. ನಮ್ಮ ನಿರ್ವಹಣೆಯ ಪರಿಜ್ಞಾನವೂ ಅವಳೇ. ಅವಳೇ ನಮ್ಮ ಸುಕೃತ್ಯದ ಅರಿವು. ನಮ್ಮ ಆವಿಷ್ಕಾರಗಳ ಆನಂದ ಆಕೆಯ ಕಂಕಣಗಳ ನಿನಾದ. ನಮ್ಮ ಸಂತೃಪ್ತಿ ಆಕೆಯ ಕಪೋಲದ ಕೆಂದಾವರೆ. ನಮ್ಮ ಪ್ರತಿಷ್ಠೆಯ ಅರಿವು ಅವಳ ಕಾಲಲ್ಲಿಯ ನೂಪುರ. ಸಂಪೂರ್ಣವೂ, ಭಯಂಕರವೂ, ಧೃತಿಗೆಡಿಸುವವಳು, ಆಶ್ಚರ್ಯಜನಕವೂ ಆದ ಈ ತಾಯಿ ಸದಾ ದಾತೆ. ಅವಳ ಕೊಡುಗೈ ಅಕ್ಷಯ. ಅವಳನ್ನು ಮೋಸಗೊಳಿಸುವುದೂ, ಜಯಿಸುವುದೂ ಅಸಾಧ್ಯವೆಂದು ಹಿಂದೂಗಳು ಅರಿತಿದ್ದಾರೆ. ಅಷ್ಟೇ ದುಷ್ಕರ ಅವಳನ್ನು ಪ್ರೀತಿಸುವುದೂ ಮತ್ತು ದ್ವೇಷಿಸುವುದು. ಕಾರಣ ಮಾಡಲು ಸಾಧ್ಯವಾದ ಒಂದನ್ನೇ ಅವರು ಮಾಡುತ್ತಾರೆ ಆರಾಧಿಸುತ್ತಾರೆ.

ಪ್ರಾಚೀನ ಅರಿವು (intution) ಮತ್ತು ಆಧುನಿಕ ಪರಿಷ್ಕೃತ ಪರಿಶೋಧನೆಗಳು ಸೂಕ್ಷ್ಮದಲ್ಲಿ (in fine) ಮೇಳೈಸುವ ಬೋಧೆಯಾಗುತ್ತದೆ. ಮಾಗಿದ ಹಿಂದುತ್ವ ಮತ್ತು ಆಧುನಿಕ ವಿಜ್ಞಾನಗಳೆರಡರಲ್ಲೂ ಸುನಿಶ್ಚಿತವಾದ ಹೊಂದಾಣಿಕೆ ಇದೆ. ದೇವರ ಪ್ರತ್ಯಕ್ಷೀಕರಣಕ್ಕಾಗಿ (realisation) ಇಪ್ಪತ್ತನೆಯ ಶತಮಾನದ ಭೌತಿಕ ವಿಜ್ಞಾನ ಧೃಡವಾಗಿ ವಿವೇಚನಾತ್ಮಕ ಹೆಜ್ಜೆಯನ್ನಿಟ್ಟಿದೆ. ಬರಲಿರುವ ಇಪ್ಪತ್ತೊಂದನೇಯ ಶತಮಾನ ಈ ಪ್ರಯಾಣದ ಅಂತ್ಯವನ್ನು ಮುಟ್ಟಿಸಬಹುದೆ? ●



# ಎಮರ್ಸನ್ ಮತ್ತು ಭಾರತೀಯ ವೇದವೇದಾಂತ

ಚಂದ್ರಶೇಖರಯ್ಯ. 1165 "ಶಾಶ್ವತಿ", ಟಿ.ಕೆ- ಬಡಾವಣೆ, 4ನೇ ಹಂತ, ಮೈಸೂರು-23

[ಹತ್ತೊಂಬತ್ತನೆಯ ಶತಮಾನದ ಅಮೇರಿಕಾದ ಸಾಹಿತ್ಯ ಮತ್ತು ಆಧ್ಯಾತ್ಮ ಪ್ರಪಂಚದಲ್ಲಿ ಸುಮಾರು ಅರ್ಧಶತಮಾನಕ್ಕೂ ಹೆಚ್ಚುಕಾಲ ತನ್ನ ದಿವ್ಯ ಜ್ಞಾನದ ಪ್ರಭೆಯನ್ನು ಬೀರಿದ ಮಹಾ ವ್ಯಕ್ತಿಯೇ ರಾಲ್ಫ್ ವಾಲ್ಡೊ ಎಮರ್ಸನ್. ಅಮೇರಿಕಾಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದ ಐವತ್ತು ವರ್ಷಗಳ ನಂತರ ಆ ನಾಡಿನ ಅಂತರಾತ್ಮನ ಆಧ್ಯಾತ್ಮ ಸ್ವಾತಂತ್ರ್ಯವನ್ನು ಘೋಷಿಸಿದ ಈ ಮಹಾಪುರುಷನ ಸಾಧನೆ ಮತ್ತು ಸಿದ್ಧಿಗಳ ಮೇಲೆ ಹಿಂದೂ ಧರ್ಮದ ಹೃದಯ ಪುಷ್ಪವೆನಿಸಿರುವ ವೇದ-ವೇದಾಂತದ ಪ್ರಭಾವವೇನು ಎಂದು ತಿಳಿಯುವುದು ಈ ಲೇಖನದ ಉದ್ದೇಶ]

ಋಗ್ವೇದದ ಋಷಿವಾಣಿಯೊಂದು "ಆನೋ ಭದ್ರಾಃ ಕ್ರತವೋ ಯಂತು ವಿಶ್ವತಃ" ಎಂದು ಹೇಳಿರುವುದು ಭಾರತೀಯ ವೇದ ವೇದಾಂತ ನಿಂತ ನೀರಲ್ಲ, ಈ ಧರ್ಮ-ವಾಹಿನಿ ಸನಾತನವಾದುದಾದರೂ ವರ್ಷ ವರ್ಷವೂ ಬರುವ ಹೊಸಮಳೆಯ ನೀರಿನಿಂದ ತುಂಬಿ ಹರಿಯುವ ಗಂಗಾ ಪ್ರವಾಹವೆಂಬುದು ಸೂಚ್ಯವಾಗುತ್ತದೆ. ಹೊಸದು ವಿಶಿಷ್ಟವಾದುದು. ಯಾವತ್ತೂ ಈ ಧರ್ಮಕ್ಕೆ ಸ್ವಾಗತ. ಮನುಕುಲದ ಒಳಿತಿಗೆ ಸಾಧಕವಾದುದನ್ನೆಲ್ಲ ತನ್ನಲ್ಲಿ ಸಾಕ್ಷಾತ್ಕರಿಸಿಕೊಂಡು ಬೆಳೆದ ಈ ಒಂದು ಕಾರಣ-ಕ್ಕಾಗಿಯೇ ಭಾರತೀಯ ವೇದ ವೇದಾಂತ ಎಲ್ಲರಿಗೂ, ಎಲ್ಲ ಧರ್ಮದವರಿಗೂ ಮತ್ತು ಎಲ್ಲ ಕಾಲಕ್ಕೂ ಅನ್ವಯಿಸುವ ತತ್ವ ದರ್ಶನವನ್ನೊಳಗೊಂಡು ವಿಶ್ವಮಾನ್ಯವಾಯಿತೆನ್ನಬಹುದು. ಈ ಧರ್ಮವಾಹಿನಿಯ ಮೂಲ ನಮಗೆ ತಿಳಿದಿರುವ ನಮ್ಮ ಇತಿಹಾಸಕ್ಕೆ ಮುನ್ನ ಆಗಿ ಹೋದ ಅಸ್ಪಷ್ಟ ದಿನಗಳಲ್ಲಿ ಮುಚ್ಚಿ ಮರೆಯಾಗಿದೆ ಎನ್ನಬಹುದು. ಈ ಧರ್ಮವನ್ನು ಸಾರುವ ವೇದಗಳು ಮತ್ತು ಉಪನಿಷತ್ತುಗಳು ಎಷ್ಟು ಪುರಾತನವಾದವು ಎಂಬುದರ ಬಗ್ಗೆ ಸಾಕಷ್ಟು ಜಿಜ್ಞಾಸೆಯಿದೆ. ಈ ವಿಷಯವಾಗಿ ವಿದೇಶೀಯರ ಅಭಿಪ್ರಾಯಗಳನ್ನೇ ಸಂಗ್ರಹಿಸಿ ಕೊಡಬೇಕೆಂದರೆ: ಮ್ಯಾಕ್ಸ್‌ಮುಲ್ಲರ್, "ಋಗ್ವೇದವು ಮನುಕುಲದ ಪ್ರಪ್ರಥಮ ಕೃತಿ" ಎಂದು ಹೇಳುತ್ತ ಮತ್ತೊಂದು ಸಂದರ್ಭದಲ್ಲಿ ಮನುಕುಲದ ಧ್ಯೇಯ, ಇಹಪರಗಳು ಮತ್ತು ಮಾನವನ ಸರ್ವಕಾಲಿಕ ಸಮಸ್ಯೆಗಳಿಗೆ ಮೊಟ್ಟಮೊದಲು ಪರಿಹಾರ ನೀಡಿದ ಭಾರತದ ಹಿರಿಮೆಯನ್ನು ಹೀಗೆ ಕೊಂಡಾಡಿದ್ದಾನೆ If I were asked under what sky the human mind has most fully devoloped some of its choicest gifts, has most deeply pondered on the great problems of life, and has found solutions of some of them which will deserve the attention even of those who have

studied plato and kant, i should point to india " (ಯಾವ ನಾಡಿನ ಆಕಾಶದ ಕೆಳಗೆ ಮಾನವನ ಬುದ್ಧಿ ಮತ್ತೆ ಸಂಪೂರ್ಣವಾಗಿ ವಿಕಾಸಗೊಂಡಿತು ಮತ್ತು ಅದು, ಜೀವನ ಮಹತ್ತರ ಸಮಸ್ಯೆಗಳನ್ನು ಕುರಿತು ಆಳವಾಗಿ ಚಿಂತಿಸುವುದರ ಜೊತೆಗೆ ಅವುಗಳಲ್ಲಿ ಹಲವಕ್ಕೆ ಪ್ಲೇಟೋ ಮತ್ತು ಕ್ಯಾಂಟ್‌ನನ್ನು ಓದಿರುವಂಥವರ ಗಮನವನ್ನು ಸೆಳೆಯುವಂತಹ ಪರಿಹಾರವನ್ನು ಕಂಡುಕೊಂಡಿತು ಎಂದು ಕೇಳಿದರೆ, ನಾನು ಭಾರತದ ಕಡೆಗೆ ಬೆರಳುಮಾಡಿ ತೋರುತ್ತೇನೆ )

ಮತ್ತೊಬ್ಬ ಜರ್ಮನ್ ತತ್ವಜ್ಞಾನಿ ಷೋಪೆನ್ ಹೌರ್ ಎಂಬುವರು ಉಪನಿಷತ್ತುಗಳಲ್ಲಿ ತುಂಬಿರುವ ಜ್ಞಾನದ ಔನ್ನತ್ಯವನ್ನು ಕುರಿತು: "(Upanishads) are the products of the highe$t wisdom ........ They are destined sooner or later to become the faith of the people" (ಉಪನಿಷತ್ತುಗಳು ಮಹಾನ್ ಅರಿವಿನ ಕೂಸುಗಳು....... ... ಇಂದಲ್ಲ ನಾಳೆ ಅವು ಎಲ್ಲರ ನಂಬಿಕೆಗೆ ಪಾತ್ರವಾಗುವುದರಲ್ಲಿ ಸಂದೇಹವಿಲ್ಲ.) ಎಂದು ಉದ್ಗರಿಸುತ್ತಾನೆ. ಜಿ. ಡಬ್ಲ್ಯು ರಸಲ್, ಬ್ಲೂಮಾಫೀಲ್ಡ್, ಎಫ್. ಡಬ್ಲ್ಯು ಥಾಮಸ್ ಮುಂತಾದ ವಿದ್ವಾಂಸರು ವೇದೋಪನಿಷತ್ತುಗಳ ಪ್ರಾಚೀನತೆಯನ್ನು ಒಪ್ಪುತ್ತಾರೆ ಆದ್ದರಿಂದಲೇ ಈ ಧರ್ಮದ ಪ್ರಭಾವ ಜಗತ್ತಿನ ಎಲ್ಲ ಧರ್ಮಗಳ ಮೇಲೂ ಒಂದಲ್ಲ ಒಂದು ರೀತಿಯಲ್ಲಿ ಆಗಿದೆಯೆಂಬ ಹೇಳಿಕೆಯನ್ನು ಯಾರು ತಿರಸ್ಕರಿಸುವಂತಿಲ್ಲ,

ಅಂದ ಹಾಗೆ, ಪ್ರಾಚೀನ ಗ್ರೀಕ್ ತತ್ವಜ್ಞಾನಿಗಳು ಭಾರತೀಯ ತತ್ವದರ್ಶನದ ಲಾಭಪಡೆದರೆಂದು ಊಹಿಸಲು ಆಧಾರಗಳಿವೆ. ಪ್ಲೋಟಿನಸ್‌ನ ವಿಚಾರ ಧಾರೆಯನ್ನೊಳಗೊಂಡ, 'Enneads' ಗ್ರಂಥ ಈ ಪ್ರಭಾವಕ್ಕೆ ಒಳಗಾದ ಬಹುಮುಖ್ಯ ಕೃತಿ. ಮುಂದೆ ಈತನ ವಿಚಾರಧಾರೆ ಸಂತ ಆಗಸ್ಟಿನ್ ಮತ್ತು ಬೋತಿಯಸ್‌ರ ಮೂಲಕ ಕ್ರೈಸ್ತ ಧರ್ಮವನ್ನು ಪ್ರವೇಶಿಸಿತು. ಇದೇ ವಿಚಾರವನ್ನು ರೊಮೈನ್ ರೊಲಾಂಡರು ವಿವೇಕಾನಂದರ ಮೇಲೆ ತಾವು ಬರೆದ ಕೃತಿಯಲ್ಲಿ ಸಮರ್ಥಿಸುತ್ತ ಹೀಗೆ ಹೇಳುತ್ತಾರೆ. a hunred facts testify to how great an extent the East was mingled with Hellenic throught during the second Century of your era. '(ಕ್ರಿ.ಶ. ಎರಡನೆಯ ಶತಮಾನದಲ್ಲಿ ಎಷ್ಟೊಂದು ತೀವ್ರವಾಗಿ ಪೌರತ್ಯ ವೈಚಾರಿಕತೆ ಹೆಲೆನಿಕ್ ವೈಚಾರಿಕತೆಯೊಂದಿಗೆ ಸಂಮಿಳಿತವಾಯಿತು ಎಂಬುದನ್ನು ನೂರು ಪುರಾವೆಗಳೇ ಸ್ಪಷ್ಟಪಡಿಸುತ್ತೇವೆ.) 18ನೆಯ ಶತಮಾನದಿಂದ ಈಚೆಗಂತೂ ಜರ್ಮನ್ ಸಾಹಿತಿಗಳು ಮತ್ತು ದಾರ್ಶನಿಕರ ಮೂಲಕ ಭಾರತೀಯ ತತ್ವದರ್ಶನ ಪಶ್ಚಿಮದ ಕಡೆಗೆ ಹೊಸ ಹೊನಲಾಗಿ ಹರಿಯಿತೆನ್ನಬಹುದು. ಆನಂತರ ಇಂಗ್ಲೀಷ್ ಕವಿ ಸಾಹಿತಿಗಳು ಈ ವಿಚಾರದಲ್ಲಿ ಪ್ರಮುಖರಾಗಿ ಕಾಣುತ್ತಾರೆ.



ಹಾಗೆ ನೋಡಿದರೆ 18ನೆಯ ಶತಮಾನದಿಂದೀಚೆಗೆ ಬಂದ ಪಶ್ಚಿಮದ ಎಲ್ಲ ಪ್ರಮುಖ ಕವಿ-ಸಾಹಿತಿ-ದಾರ್ಶನಿಕ-ಸಂತ-ಸುಧಾರಕರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಈಸೆಳೆತಕ್ಕೆ ಸಿಕ್ಕಿದ್ದಾರೆನ್ನಬಹುದು. ಹೀಗಾಗಿ ಭಾರತೀಯ ವೇದ ವೇದಾಂತ ಅನಾದಿಕಾಲದಿಂದಲೂ ಜಗತ್ತಿನಾದ್ಯಂತ ತನ್ನದೇ ಆದ ಆಧ್ಯಾತ್ಮ ಪ್ರಜಾಪ್ರಭುತ್ವ (Metaphysical Democracy) ವೊಂದರ ಕೇಂದ್ರವಾಗಿದೆ ಎನ್ನ ಬಹುದು,

### ಎಮರ್ಸನ್

ಈಗ ಎಮರ್ಸನ್‌ನ ಮೇಲೆ ಭಾರತೀಯ ವೇದ-ವೇದಾಂತದ ಪ್ರಭಾವ ಎಷ್ಟರ ಮಟ್ಟಿಗಾಗಿದೆ ಎಂಬ ವಿಷಯಕ್ಕೆ ಬರೋಣ. ಎಮರ್ಸನ್ (1803–82) ಒಬ್ಬ ಹುಟ್ಟು ಕವಿ, ಪ್ರಬಂಧಕಾರ, ಪತ್ರಿಕೋದ್ಯೋಗಿ ಮತ್ತು ಶ್ರೇಷ್ಠಮಟ್ಟದ ತತ್ವಬೋಧಕ ಬಾಲ್ಯದಲ್ಲಿ ಬಡತನ, ಯೌವನದಲ್ಲಿ ನಿರಂತರ ಹೋರಾಟ. ಸಾವು-ನೋವು-ಹೀಗೆ ಈತನ ಆರಂಭದ ಜೀವನ ನಿರಾಸೆ ಮತ್ತು ಅತೃಪ್ತಿಯ ವಾತಾವರಣದಲ್ಲಿ ಅಂಕುರಿಸಿತು. ಆದರೆ ಎಮರ್ಸನ್ ತುಂಬ ಸೂಕ್ಷ್ಮಮತಿಯುಳ್ಳ ಬಹುಮುಖ ಪ್ರತಿಭೆಯ ಉತ್ಸಾಹಶಾಲಿ ವ್ಯಕ್ತಿಯಾದುದರಿಂದ ಕಡೆಗಾಣುವ ಶಕ್ತಿಯನ್ನು ರೂಢಿಸಿಕೊಂಡ. ಹಾರ್ವರ್ಡ್ ವಿಶ್ವ-ವಿದ್ಯಾಲಯದಲ್ಲಿ ಕಲಿತು ಪಾದ್ರಿಯಾಗಿ ಜೀವನವನ್ನು ಆರಂಭಿಸಿದ ಎಮರ್ಸನ್, ಮುಂದೆ ತನ್ನ ಜೀವಿತಕಾಲದಲ್ಲೇ ನಡೆದ ಅಮೇರಿಕಾದ ಆಧ್ಯಾತ್ಮಿಕ ಮತ್ತು ಬೌದ್ಧಿಕ ಕ್ರಾಂತಿಯೊಂದಕ್ಕೆ ಸ್ಫೂರ್ತಿಯಿತ್ತ ಚೇತನ. ಜೀವ-ಜೀವನವನ್ನು ಹೊಸ ಆಯಾಮದಿಂದ ನೋಡಿ ಅನುಭವಿಸಿ ನಿರುಪಯೋಗಿ ಎಂದು ಕಂಡ ಹಳೆಯದರ ತಳಹದಿಯ ಮೇಲೆ ಮತ್ತೊಮ್ಮೆ ಅದನ್ನು ಆಧ್ಯಾತ್ಮದ ಬೆಳಕಿನಲ್ಲಿ ಪ್ರತಿಷ್ಠಾಪಿಸಬೇಕೆಂದು ಸಾಧನೆ ಮಾಡಿದ ಸಿದ್ಧಪುರುಷ, ಈತನ ಈ ಸಾಧನೆ ಸಿದ್ಧಿಯ ಫಲವಾಗಿ ಅಮೇರಿಕಾದಲ್ಲಿ ಹೊಸದೊಂದು ಪಂಥವೇ ಆರಂಭವಾಯಿತು. ಇದನ್ನೇ ಅತೀಂದ್ರಿಯ ತತ್ವಶಾಸ್ತ್ರದ ಆಧಾರದ ಮೇಲೆ ರೂಪುಗೊಂಡ ಅನುಭವ ದರ್ಶನ ಪಂಥ (Transcendentalism) ವೆಂದು ಕರೆಯುವುದು. ಎಮರ್ಸನ್‌ನನ ಈ ಅನುಭವದರ್ಶನ ಪರಮಾತ್ಮನು ಅನುಭವಾತೀತ ಮತ್ತು ವಿಷಯಾತೀತ ಎಂದು ಸಾರುವುದರ ಜೊತೆಗೆ ಅವನ ಸಾಕ್ಷಾತ್ಕಾರ ಪಡೆಯಲು ಮನುಷ್ಯನಲ್ಲಿರುವ ಇಂದ್ರಿಯಾತೀತ ಸಂಕಲ್ಪಶಕ್ತಿಯೊಂದರ ಸರಿಯಾದ ಉಪಯೋಗದಿಂದ ಮಾತ್ರ ಸಾಧ್ಯವೆಂದು ತಿಳಿಸುತ್ತದೆ.

ಎಮರ್ಸನ್‌ನ ಜೀವನದಲ್ಲಿ ಮಹತ್ತರ ಬದಲಾವಣೆಯಾದುದು 1836ರಲ್ಲಿ ನಡೆದ ಒಂದು ಘಟನೆಯಿಂದ. ಅದೆಂದರೆ ಇಂಗ್ಲೆಂಡಿನಲ್ಲಿ ಏರ್ಪಟ್ಟ ಅವನ ಮತ್ತು ಕಾರ್ಲೈಲ್‌ರ ನಡುವಿನ ಒಂದು ಸುದೀರ್ಘ ಭೇಟಿ. ಇದರ ಪರಿಣಾಮವಾಗಿ ಎಮರ್ಸ್‌ನಲ್ಲಿ ಹುದುಗಿದ್ದ ಸುಪ್ತ ಚೈತನ್ಯಶಕ್ತಿಗಳೆಲ್ಲ ಹೊರಹೊಮ್ಮಿದುವು. ಆ ಸಮಯದಲ್ಲಿ ಅವನು ತನ್ನ ಕಷ್ಟ ಪರಂಪರೆ, ಅದರಿಂದುಟಾದ ಮಾನಸಿಕ ಅಶಾಂತಿ ಮತ್ತು ಅದನ್ನು ಎದುರಿಸಲು ಬಯಸಿದ ಆಧ್ಯಾತ್ಮಿಕ ತಿಳುವಿನ ಅವಶ್ಯಕತೆಯನ್ನು ಕುರಿತು ಕೇಳಿದಾಗ

ಕಾರ್ಲೈಲ್ ತನ್ನ ಪಕ್ಕದಲ್ಲಿ ಹರಡಿದ್ದ ಪುಸ್ತಕಗಳ ರಾಸಿಯಿಂದ ಒಂದನ್ನೆತ್ತಿ ಕೊಡುತ್ತ ತಾನು ಅದರಿಂದ ಪಡೆದ ಸುಖಶಾಂತಿಯನ್ನು ಕೊಂಡಾಡಿ ಹೀಗೆ ಹೇಳುತ್ತಾನೆ. This is a most Inspiring book, it has brought comfort and consolation in my life, I hope this will do the same to you, Take it and read it, (ಇದೊಂದು ಸ್ಫೂರ್ತಿದಾಯಕ ಕೃತಿ; ನನಗೆ ಇದರಿಂದ ಶಾಂತಿ ಮತ್ತು ನೆಮ್ಮದಿಗಳು ದೊರೆತಿವೆ. ನಿಮಗೂ ಅಂತಹ ಸುಖವನ್ನೇ ಇದು ನೀಡಬಹುದು. ತೆಗೆದುಕೊಂಡು(ಓದಿ. ಹೀಗೆ ಕಾರ್ಲೈಲ್‌ರು ಕೊಟ್ಟ ಪುಸ್ತಕ ಮತ್ತಾವುದೂ ಆಗಿರದೆ ಚಾರ್ಲ್ಸ್ ವಿಲ್ಕಿಂನ್ಸ್‌ರಿಂದ ಇಂಗ್ಲೀಷ್‌ಗೆ ಅನುವಾದಗೊಂಡು ಲಂಡನ್‌ನಲ್ಲಿ ಪ್ರಕಟಗೊಂಡಿದ್ದ 'ಭಗವದ್ಗೀತೆ ಈ ಅನುವಾದಿತ The Song Celestialನ ಅಭ್ಯಾಸ ಎಮರ್ಸನ್‌ಗೆ ಪುನರ್ಜನ್ಮವಿತ್ತಿತೆಂದೇ ಹೇಳಬೇಕು. ಇದರ ಫಲವಾಗಿ ಮೂಡಿಬಂದ ಕವಿತೆಯೆ ಎಮರ್ಸನ್‌ಗೆ "ಬ್ರಹ್ಮ" ಈ ಕವಿತೆಯ ವಿಚಾರವಾಗಿ ಮುಂದೆ ತಿಳಿಯೋಣ. ಇದೇ ಸಮಯದಲ್ಲಿ ಮಹಾಕವಿ ವರ್ಡ್ಸ್‌ವರ್ತ್ ಮತ್ತು ಕೋಲ್‌ರಿಜ್‌ರೂ ಎಮರ್ಸನ್ ಮೇಲೆ ಅಪಾರ ಪ್ರಭಾವವನ್ನು ಬೀರಿದ್ದುಂಟು. ಹೀಗೆ ಪ್ರೇರಿತಗೊಂಡ ಎಮರ್ಸನ್ ಅಂದು ತನಗೆ ದೊರೆಯಲಿದ್ದ ಆಧ್ಯಾತ್ಮ ವಿಚಾರವನ್ನು ತಿಳಿಸಿಕೊಡುವ ವಿವಿಧ ಮೂಲಗಳನ್ನು ಮತ್ತು ಕೃತಿಗಳನ್ನು ಶೋಧಿಸಿದ ಕಾರ್ಲೈಲ್ ಮತ್ತು ಕೋಲ್‌ರಿಜ್‌ರ ಕೃತಿಗಳ ಜೊತೆಗೆ ಪ್ಲೋಟಿನಸ್, ಪ್ಲೇಟೋ, ಸ್ವೀಡನ್‌ನ ಮುಮುಕ್ಷು ಇಮ್ಯಾನುಯೆಲ್ ಸ್ವೀಡನ್ ಬೊರ್ಗ, ಸಂತ ಅಗಸ್ಟಿನ್ ಮತ್ತು ಬಹು-ಮುಖ್ಯವಾಗಿ ಏಷ್ಯಾದ ಧರ್ಮಗ್ರಂಥವನ್ನು ವಿಶೇಷವಾಗಿ ಅಭ್ಯಾಸಮಾಡಿದ. ಮೇಲೆ ಹೇಳಿದ ಬಹುತೇಕ ಎಲ್ಲರೂ ಭಾರತದ ಸನಾತನ ಧರ್ಮದ ಪ್ರಭಾವಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಒಳಗಾದವರೆ. ಹೀಗಾಗಿ ವೇದೋಪನಿಷತ್ತು ಮತ್ತು ಭಗವದ್ಗೀತೆಯ ಪ್ರಭಾವ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಎಮರ್ಸನ್‌ನ ಜೀವನದ ಮೇಲಾಗಿ ಅವನ ಸ್ವತಂತ್ರ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಅನಂತರ ಅವನು ಬರೆದ ಕಾವ್ಯ ಮತ್ತು ಪ್ರಬಂಧಗಳ ಮೇಲೆ ವೇದ ವೇದಾಂತಗಳು ಸಾರುವ ತತ್ವದರ್ಶನದ ಚಿರಮುದ್ರೆ ಒತ್ತಿರುವುದು ಕಾಣಬರುತ್ತದೆ.

ಎಮರ್ಸನ್‌ನ ವಿಚಾರಧಾರೆಯನ್ನು ಅವಲೋಕಿಸಿವಾಗ ನಮ್ಮ ಮುಂದೆ ನಿಲ್ಲುವ ಅವನ ವ್ಯಕ್ತಿತ್ವ ಎಷ್ಟು ಉಜ್ವಲವಾದುದೆಂದರೆ ತನ್ನ ಅಂತದೃಷ್ಟಿಗೆ, ಒಳ ಅರಿವಿಗೆ



ಹೊಳೆಯದ ಯಾವ ವಿಚಾರವನ್ನು ಅವನು ಸರಿಯೆಂದು ಒಪ್ಪುತ್ತಿರಲಿಲ್ಲ. ಇದನ್ನೆ ಆತ ತನ್ನ ಜೀವನದಲ್ಲಿ ಅನುಸರಣೆಗೆ ತಂದು ತನ್ನ ಜನತೆಗೆ ತಾನು ಕಂಡ 'ಅನುಭವ ದರ್ಶನದ" ಒಂದು ಅಂಶವಾದ ದೇವರು ಮತ್ತು ಪ್ರತಿವ್ಯಕ್ತಿಯ ನಡುವಿನ ನೇರ ಸಂಬಂಧವನ್ನು ಒತ್ತಿ ಹೇಳುತ್ತಿದ್ದ. ಅಂದರೆ ತನಗೆ ಸರಿದೋರುವುದನ್ನು ಮಾತ್ರ ಒಪ್ಪುವ, ಹಾಗೆ ಒಪ್ಪಿದುದನ್ನು ಎಂತಹ ಕಠಿಣ ಪರಿಸ್ಥಿಯಲ್ಲೂ ಯಾವ ಪರೀಕ್ಷೆಗಾದರೂ ಒಳಪಡಿಸುವ ಎದೆಗಾರಿಕೆ ಎಮರ್ಸನ್‌ನಿಗೆ ಇತ್ತು.

'Welcome !" The wood God murmured
Through the leaves
'Welcome, though late, unknowing, yet
Known to me"

(ಸ್ವಾಗತ ! ಎಲೆಮರೆಯೊಳಗಿಂದ ಅರಣ್ಯದೇವ ಉದ್ಗರಿಸಿದ 'ತಡವಾದರೂ ಚಿಂತೆಯಿಲ್ಲ, ಸ್ವಾಗತ ! ನಾನು ನಿನಗೆ ಗೊತ್ತಿಲ್ಲದಿದ್ದರೂ ನೀನು ನನಗೆ ಗೊತ್ತು." ಹೀಗೆ ಹೇಳುವ ಎಮರ್ಸನ್ ಮುಂದೆ ತನ್ನ ನಾಡಿನಲ್ಲಿ 'Great vedantist ಎಂದೇ ಪ್ರಸಿದ್ಧಿಗೆ ಬಂದ.

**ಸಾಮಾಜಿಕ ಪ್ರಜ್ಞೆ :**

ಎಮರ್ಸನ್ ಇಂಗ್ಲೆಂಡಿನಿಂದ ಹಿಂದಿರುಗಿದವನೇ ಅಮೇರಿಕಾದ ಜನತೆಯನ್ನು ಕುರಿತು ತನ್ನ ಅರಿವನ್ನು ತಿಳಿಸಲು ಪ್ರವಚನ ಮತ್ತು ಭಾಷಣಗಳ ಮಾಲೆಯನ್ನೇ ಆರಂಭಿಸಿದ' ಲೌಕಿಕ ವ್ಯವಹಾರಗಳು ಸತ್ಯಶುದ್ಧವಾಗಲು, ಅದರಿಂದ ಸಾಮಾಜಿಕ ಬದಲಾವಣೆ ತ್ವರಿತಗೊಳ್ಳಲು ಏನು ಅವಶ್ಯಕವೋ ಅದನ್ನು ತನ್ನ ಪ್ರವಚನಗಳಲ್ಲಿ ಒತ್ತಿ ಹೇಳತೊಡಗಿದ. ಕ್ರೈಸ್ತ ಧರ್ಮದ ಕೆಲವು ತತ್ವಬೋಧನೆಗಳು ಎಷ್ಟು ಅರ್ಥಶೂನ್ಯವೆಂದು ವೈಜ್ಞಾನಿಕ ದೃಷ್ಟಿಯಲ್ಲಿ ವಿವರಿಸಿದ. ಧರ್ಮದ ಬಗ್ಗೆ ಬರೆಯುತ್ತ the religion that is afraid of science dishonours God and committs suicide. (ಧರ್ಮವೊಂದು ವಿಜ್ಞಾನಕ್ಕೆ ಹೆದರುವುದೇ ಆದರೆ ಅದು ದೇವರಿಗೆ ಅಗೌರವವನ್ನು ತೋರಿದಂತೆ ಮತ್ತು ಹಾಗೆ ಮಾಡಿ ತನ್ನ ಅಂತ್ಯವನ್ನು ತಾನೆ ತಂದುಕೊಟ್ಟಂತೆ) ಎಂದು ಸ್ಪಷ್ಟಪಡಿಸುತ್ತಾನೆ. ಬಹುಶಃ

ಇದಕ್ಕೆ ಸ್ಫೂರ್ತಿ ಉಪನಿಷತ್ತುಗಳ ಪ್ರಭಾವವಿರಬೇಕು. ವೇದಗಳಲ್ಲಿ ಉಕ್ತವಾಗಿ
ಋವ ಹಲವಾರು ಮತಾಚಾರಗಳು, ವಿಧಿ, ಸಂಸ್ಕಾರಗಳು ಮತ್ತು ಪ್ರಕ್ರಿಯೆಗ
ಳನ್ನು ಶುಷ್ಕವಾದುವುಗಳೆಂದು ಉಪನಿಷತ್ತುಗಳು ವ್ಯಕ್ತಪಡಿಸಿರುವ ಅಸಮ್ಮತಿ
ಯನ್ನು ಇಲ್ಲಿ ಸ್ಮರಿಸಬಹುದು. ಉಪನಿಷತ್ತುಗಳು ಒತ್ತಿ ಹೇಳುವ ವ್ಯಕ್ತಿಯ
ಅಂತರ್ಗತ ಶಕ್ತಿಯ ಬೆಳವಣಿಗೆ ಮತ್ತು ಆತ್ಮೋದ್ಧಾರವನ್ನೇ ಸಮರ್ಥಿಸುತ್ತ ಎಮ
ರ್ಸನ್ ಹೀಗೆ ಹೇಳುತ್ತಾನೆ. 'Trust thy self every heart
vibrates to that iron string'' (ನಿನ್ನನ್ನು ನೀನು ನಂಬು, ಆ ನಂಬಿ
ಕೆಯ ಕಬ್ಬಿಣದ ತಂತಿಗೆ ಪ್ರತಿಯೊಂದು ತಂತಿಯೂ ಮಿಡಿಯುತ್ತದೆ) ಈ ಮಾತು
ಗಳು ಕಠೋಪನಿಷತ್ತಿನ 'ವ್ಯಕ್ತಿಗಿಂತ ಮಿಗಿಲಾದದ್ದು ಬೇರೊಂದಿಲ್ಲ,' ಎಂಬ
ಮಾತನ್ನು ನೆನಪಿಗೆ ತರುತ್ತದೆ. ಹೀಗೆ ರೂಪುಗೊಂಡ ಎಮರ್ಸನ್‌ನ ವೈಚಾರಿಕ
ಪ್ರಜ್ಞೆ ತಾನು ಹುಟ್ಟಿದ ಧರ್ಮದಲ್ಲಿಯೇ ಸಡಿಲತೆಯನ್ನು ಪತ್ತೆ ಹಚ್ಚುತ್ತದೆ.
ಮಾನವನ ನೈತಿಕ ಮೌಲ್ಯಗಳನ್ನು ಗುರುತಿಸಿ ಅವುಗಳ ಬೆಳವಣಿಗೆಗೆ ಆಶ್ರಯ
ನೀಡದ ಧರ್ಮ ಸಂಸ್ಥೆಗಳ ಸೋಲನ್ನು, 'the famine of our churches
(ನಮ್ಮ ಇಗರ್ಜಿಗಳ ಸೋಲು) ಎಂದು ಎಮರ್ಸನ್ ದೂರುತ್ತಾನೆ. ಇವನಿಗಾಗದ
ವರು ಇವನ ಧಾರ್ಮಿಕ ಚಳುವಳಿಯನ್ನು ವಿರೋಧಿಸುತ್ತ ಇದನ್ನು 'the latest
form of infidelity' (ಇತ್ತೀಚಿನ ನಮ್ಮ ಅವಿಧೇಯತೆ') ಎಂದು ಟೀಕಿಸು
ತ್ತಾರೆ. ಆದರೆ ಅಷ್ಟರಲ್ಲೆ ಪ್ರಭಾವಶಾಲಿಯಾಗಿದ್ದ ಎಮರ್ಸನ್‌ನ ಕೂಗು 1838
ರ ವೇಳೆಗೆ ಅಮೇರಿಕಾದ ಹಲವಡೆ ಕೇಳಿಬರುತ್ತದೆ. ಈ ವೇಳೆಗಾಗಲೇ ಆವನು
ಕವಿ, ಸಾಹಿತಿ ಮತ್ತು ದಾರ್ಶನಿಕನಾಗಿ ಅಪಾರ ಕೀರ್ತಿಯನ್ನು ಗಳಿಸಿದ್ದ.
ಆಗಲೇ ಇವನ ಹೊಸ ಪಂಥ ಅನುಭವ ದರ್ಶನದ ವಿಚಾರ ಜನತೆಗೆ ಮುಟ್ಟಲು
ಆರಂಭವಾದುದು. ತಾನು ನಾಳಿನ ಜನಾಂಗ (Party of the future) ಕ್ಕೆ
ಸೇರಿದವನು ಎಂದು ಹೇಳುತ್ತಾ, ತನ್ನ ನಿರಂತರ ಹೋರಾಟ ಪ್ರಾಪಂಚಿಕ
(materialists) ದಿಂದಲೇ ತುಂಬಿರುವ ಹಳಸಿದ ಗುಂಪನ್ನು (Party of the
past) ಪರಾಜಿತಗೊಳಿಸುವುದೇ ಆಗಿದೆ ಎಂದು ಸಾರಿದನು. ಎಮರ್ಸನ್‌ನ ಈ
ಚಳುವಳಿಯ ಧ್ಯೇಯ ಸಾಮಾಜಿಕ ಬದಲಾವಣೆಯನ್ನು ತ್ವರಿತಗೊಳಿಸುವುದೇ
ಆಗಿತ್ತು. ಈ ದಿಕ್ಕಿನಲ್ಲಿ ಇವನಿಟ್ಟ ಮೊದಲ ಹೆಜ್ಜೆಯೆಂದರೆ, ಧರ್ಮವನ್ನು ಧಾರ್ಮಿಕ
ಸಂಸ್ಥೆಗಳ ಗೋಡೆಗಳ ಮಧ್ಯದಿಂದ ಹೊರತಂದು' ಕಾಲ್ಪನಿಕ ಕಟ್ಟುಗಳಿಂದ ಮುಕ್ತ
ಗೊಳಿಸಿ ಜನ ಸಾಮಾನ್ಯರಿಗೆ ಎಟುಕುವಂತೆ ಮಾಡುವುದೇ ಆಗಿತ್ತು. ಪವಾಡಗಳ
ದೇವರನ್ನು ದೂರೀಕರಿಸಿ, ಪ್ರಕೃತಿದತ್ತವಾದ ಸಹಜಜ್ಞಾನ ಅಥವಾ ಅಂತದೃಷ್ಟಿಗೆ
ಕಾಣುವ ದೇವರನ್ನು ಅರಸಬೇಕೆಂದು ಪ್ರತಿಪಾದಿಸಿದನು. ಧ್ಯಾನದಿಂದ, ಆತ್ಮ
ಭಾವದಿಂದಲೂ ಈ ವಿಷಯಾತೀತ ವಿಷಯದ ಅನುಭವ ಸಾಧ್ಯವೆಂದು



ತನ್ನ ಜನಕ್ಕೆ ಎಮರ್ಸನ್ ಸ್ಪಷ್ಟ ಪಡಿಸುತ್ತಾನೆ. ಇದಕ್ಕೆ ಪೂರಕವಾಗಿ ಜೀವನದ ಅಗತ್ಯಗಳನ್ನು ಪಡೆದುಕೊಳ್ಳಲು ದುಡಿಮೆ, ಸತ್ಯ ಸಂಧತೆ ಸಹಭಾಗಿತ್ವ ಮತ್ತು ತನ್ನಲ್ಲಿಡುವಷ್ಟೇ ವಿಶ್ವಾಸವನ್ನು ಬೇರೆಯವರಲ್ಲೂ ಇಡುವುದು ಈ ಮೌಲ್ಯಗಳು ಪ್ರತಿಯೊಬ್ಬರಲ್ಲಿಯೂ ಇರುವ ಇಂದ್ರಿಯಾತೀತ ಸಂಕಲ್ಪಶಕ್ತಿಯನ್ನು ಉದ್ದೀಪನ ಗೊಳಿಸುತ್ತದೆ ಎಂದು ಹೇಳುತ್ತಾನೆ. ಈ ವಿಚಾರಧಾರೆಗೆ ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಈ ವ್ಯಕ್ತಿಯ ಉದ್ಧಾರ ತನ್ನಲ್ಲಿ ಮತ್ತು ತಾನು ನಂಬಿದ ಧರ್ಮದಲ್ಲಿಡುವ ಸಂಪೂರ್ಣ ಸ್ವಾತಂತ್ರ್ಯ ಮತ್ತು ವಿಶ್ವಾಸದಿಂದ ಮಾತ್ರ ಸಾಧ್ಯವೆನ್ನುತ್ತಾ ಎಮರ್ಸನ್ ಹೀಗೆ ಹೇಳುತ್ತಾನೆ. (freedm is the essence of this faith ) ಈ ಮಾರ್ಗದ ಆಧಾರವೇ ಸ್ವಾತಂತ್ರ್ಯಪ್ರೇಮ.)

ಎಮರ್ಸನ್‌ನ ದೃಷ್ಟಿಯಲ್ಲಿ ಕ್ರಿಸ್ತನೆಂದರೆ ಮನುಷ್ಯನ ಅತಿಶ್ರೇಷ್ಠ ಆಧ್ಯಾತ್ಮಿಕ ಮತ್ತು ಬೌದ್ಧಿಕ ಗುಣಗಳ ಸಾಕ್ಷಾತ್ಕಾರ ಪಡೆದ ಅಮೃತ ಸ್ವರೂಪ. ಆದುದರಿಂದಲೇ ಎಮರ್ಸನ್ ತನ್ನ ದೇವರನ್ನು "ವಿಶ್ವಾತ್ಮ" (Over Soul) ನೆಂದು ಕರೆದಿರುವುದು ಜಗದಂತರ್ಯಾಮಿಯಾದ ಈ ವಿಶ್ವಾತ್ಮನನ್ನು ಸ್ಥಿರವಾಗಿ ಗ್ರಹಿಸಲು ಯಾರ ಮಧ್ಯಸ್ಥಿಕೆಯನ್ನು ಎಮರ್ಸನ್ ಒಪ್ಪಿದಂತೆ ಕಾಣಲಿಲ್ಲ. ಎಲ್ಲರಲ್ಲಿಯೂ ಮತ್ತು ಎಲ್ಲೆಲ್ಲಿಯೂ ಈ ವಿಶ್ವಾತ್ಮನನ್ನೇ ಯಾವನು ಕಾಣುತ್ತಾನೋ ಅವನು ತನ್ನ ಸ್ವಪರಿಪೂರ್ಣತೆಯಿಂದ ವಿಶ್ವಾತ್ಮನೇ ಆಗುತ್ತಾನೆ ಎಂಬುದು ಎಮರ್ಸನ್‌ನ ಸ್ಪಷ್ಟ ನಿಲುವು. ಈ ಹಿನ್ನೆಲೆಯಲ್ಲಿ ಕನ್ನಡ ನಾಡಿನ ಬಸವಾದಿ ಶಿವಶರಣರ ಧಾರ್ಮಿಕ ಮತ್ತು ಆಧ್ಯಾತ್ಮಿಕ ನಿಲುವು ಏನೆಂಬುದನ್ನು ಸ್ಮರಿಸಿಕೊಳ್ಳುವುದರ ಜೊತೆಗೆ ಇದೇ ಅಭಿಪ್ರಾಯವನ್ನು ಎತ್ತಿ ಹಿಡಿಯುವ "ಯಸ್ಮಿನ್‌ಸರ್ವಾಣಿ ........." ಎಂದು ಆರಂಭವಾಗುವ ಈಶಾವಾಸ್ಯೋಪನಿಷತ್ತಿನ ಪ್ರಸಿದ್ಧ ಶ್ಲೋಕವನ್ನು ಸ್ಮರಿಸಬಹುದು.

ಎಮರ್ಸನ್‌ನ ಈ ಬೋಧನೆ ಶುಷ್ಕ ತತ್ವಗಳ ಅಂಧಾನು ಕರಣೆ ಮಾಡುತ್ತ ಲೌಕಿಕರಲ್ಲಿ ಲೌಕಿಕರಾಗಿದ್ದ ಸಮಕಾಲೀನ ಅಮೇರಿಕನ್ನರಿಗೆ ತುಂಬ ಹಿಡಿಸಿತು. ಸ್ವಚ್ಛಂದ ವಿಚಾರಧಾರೆ ಪ್ರತಿ ವ್ಯಕ್ತಿಯ ಘನತೆಯ ದ್ಯೋತಕವಾಗುವುದನ್ನು ಮನಗಾಣಲು ಆ ಸಮಾಜಕ್ಕೆ ಬಹುಕಾಲ ಬೇಕಾಗಲಿಲ್ಲ. ಎಮರ್ಸನ್‌ನ ಜೀವಿತ ಕಾಲದಲ್ಲೇ ಅವನ ಅನುಯಾಯಿಗಳ ಸಂಖ್ಯೆ ಗಣನೀಯವಾಗಿ ಬೆಳೆದು ಅವನ ಅನುಭವ ದರ್ಶನದ ಪಂಥದ ಏಳಿಗೆಗೆ ಮತ್ತು ಯಶಸ್ಸಿಗೆ ಸಮಕಾಲೀನ ಬರಹಗಾರರು ಮತ್ತು ಸಾಹಿತಿಗಳು ಮಿತ್ರರಂತೆ ಶ್ರಮಿಸಿದರು.

## ಕೃತಿಗಳ ಮೇಲೆ ವೇದ ವೇದಾಂತದ ಪ್ರಭಾವ

ಎಮರ್ಸನ್ ಹೊಂದಿದ್ದ ಇಂತಹ ಉದಾತ್ತ ತತ್ವ ವಿಚಾರಗಳನ್ನು ಮುಂದಿಟ್ಟುಕೊಂಡು ಅವನ ಬಹುಮುಖ ಪ್ರಜ್ಞೆಯ ಮೇಲೆ ವೇದ-ವೇದಾಂತದ ಪ್ರಭಾವ ಏನು

ಎಂಬುದನ್ನು ಈಗ ಪರಿಶೀಲಿಸುವ. ಅವನ ಪ್ರಬಂಧಗಳು ಮತ್ತು ಕಾವ್ಯ 1836 ರಿಂದ ಹಿಡಿದು 1860ರ ವರೆಗೆ ನಿರಂತರವಾಗಿ ಪ್ರಕಾಶನ ಗೊಳ್ಳುತ್ತವೆ. ಅವನ ಅನುಭವ ದರ್ಶನವ ಅಧಿಕೃತ ಘೋಷಣೆಗಳೆಂದು ಕೀರ್ತಿಪಡೆದಿರುವ ‚Nature" (ಪ್ರಕೃತಿ) ಮತ್ತು American Scholar (ಅಮೇರಿಕಾದ ವಿದ್ವಾಂಸ) ಗದ್ಯ ಕೃತಿಗಳಲ್ಲಿ ಈತನ ದರ್ಶನಕ್ಕೆ" ಸಂಬಂಧಿಸಿದ ತಾತ್ವಿಕ ವಿವರಗಳು ದೊರೆಯುತ್ತವೆ. ಇಲ್ಲಿಯೇ ಮನುಕುಲದ ಉದಾತ್ತಧ್ಯೇಯಗಳನ್ನು ಪುನಃ ಪ್ರತಿಷ್ಠಾಪಿಸುವ ವಿಚಾರವಾಗಿ ಪ್ರಸ್ತಾಪಿಸುತ್ತ, Transcendentalism is nothing but idealism, reasserting itself a new (ಅನುಭವ ದರ್ಶನವೆಂಬುದು ತನ್ನನ್ನು ತಾನು ಪುನಃ ಪ್ರತಿಷ್ಠಾಪಿಸಿಕೊಳ್ಳುವ ಒಂದು ಆದರ್ಶ) ಎಂದು ಎಮರ್ಸ್‌ನ್ ಘೋಷಿ ಸಿದುದು. ಹೀಗೆ ಹೊಸದೊಂದು ವಿಚಾರ ಕ್ರಾಂತಿ ಕಾಳ್ಗಿಚ್ಚಿನಂತೆ ಹಬ್ಬುವ ಸುದ್ದಿ- ಯನ್ನು ಕುರಿತು ಎಮರ್ಸನ್‌ನೇ Beware when the Great God lets loose a thinker on this planet –....... all things are at risk (ಎಚ್ಚರವಿರಲಿ ನಮ್ಮ ಮಹಾದೇವನು ಒಬ್ಬ ವಿಚಾರವಂತನನ್ನು ಈ ಭೂಮಿಯ ಮೇಲೆ ಕಳಿಸಿದಾಗ ಎಲ್ಲದೂ ತಲ್ಲಣಗೊಳ್ಳುತ್ತದೆ) ಎಂದು ಸಾರಿದನು. ಮುಂದು- ವರಿದು ಪ್ರತಿ ವ್ಯಕ್ತಿಯ ಸಮಗ್ರತೆ ವೈಚಾರಿಕತೆ ಮತ್ತು ಸಹಜ ಜ್ಞಾನದ ಆವಶ್ಯ- ಕತೆಯನ್ನು ಒತ್ತಿಹೇಳುತ್ತ, ತನ್ನ ಅನುಭವದರ್ಶನದ ತತ್ವಸಾರ ನಿಂತಿರುವುದು, On the power of thought, and of will, on inspiration, on miracle (intuitive power), on individual culture........ (and on) the piety and the spirit of man (ಮಾನವನ ವೈಚಾರಿ ಕತೆಯ ಮೇಲೆ, ಸಂಕಲ್ಪ ಶಕ್ತಿಯ ಮೇಲೆ, ಸ್ಫೂರ್ತಿಯ ಮೇಲೆ, ಧೀಶಕ್ತಿಯಮೇಲೆ ವೈಯುಕ್ತಿಕ ಸಾಧನೆಯ ಮೇಲೆ ಮತ್ತು ಭಕ್ತಿ ಮತ್ತು ಆತ್ಮ ವಿರಕ್ತಿಯ ಮೇಲೆ) ಎಂದು ಸ್ಪಷ್ಟಪಡಿಸುತ್ತಾನೆ. ಎಲ್ಲರಲ್ಲಿರುವ ಅಂತಸ್ಥ ಅರ್ಹತೆಯ ವಿಚಾರವಾಗಿ, Who can set bounds to the possibilities of man? (ಮಾನವನ ಶಕ್ತಿ ಸಾಮರ್ಥ್ಯಗಳಿಗೆ ಮೇರೆ ಮಿತಿಗಳನ್ನು ನಿರ್ಮಿಸಲುಂಟೆ?) ಎಂದು ಪ್ರಶ್ನಿ ಸುತ್ತಾನೆ. ಮುಂದುವರಿದು, ಆತ್ಮನಿಗೂ ಪರಮಾತ್ಮನಿಗೂ ಇರುವ ನೇರ ಸಂಪರ್ಕ ವನ್ನು ಕುರಿತು We learn that man has access to the entire mind of God, is himself the creater in the finite' (ಭಗವಂತನ ಆಲೋಚನೆಗಳನ್ನು ಅರಿಯುವ ಸಾಮರ್ಥ್ಯ ಮಾನವನಿಗುಂಟು, ಒಂದು ಅರ್ಥದಲ್ಲಿ ಮಾನವನೇ ಲೌಕಿಕದ ಸೃಷ್ಟಿಕರ್ತ) ಎಂದು ತಿಳಿಸುತ್ತಾನೆ. ದೇವ ಮಾನವರ ಸಂಬಂಧವನ್ನು ನೆಲದ ಮೇಲೆ ನಿಂತಿರುವ ತರುವಿಗೆ ಹೋಲಿಸಿ ಹೀಗೆನ್ನುತ್ತಾನೆ. As a plant upon the earth, so a man rests upon the bosom of God (ಭೂಮಿಯ ಮೇಲಿನ ತಿರುವಿನಂತೆ, ಭಗವಂತನ ಹೃದಯದಲ್ಲಿ



ಮಾನವ ನೆಲೆಗೊಂಡಿದ್ದಾನೆ) ಈ ವಿಚಾರಧಾರೆ ಅಂದಿನ ಅಮೇರಿಕನ್ನರಿಗೆ ಹೊಸ ದಾಗಿ ಕಂಡು ಅವರಿಗೆ ವಿದ್ಯುತ್ ಸಂಚಾರದ ಅನುಭವವಾದರೂ ಭಾರತೀಯರಿಗೆ ಇದಾವುದೂ ಹೊಸದಲ್ಲ. ವೇದೋಪನಿಷತ್ತುಗಳಲ್ಲಿ, ಗೀತೆ ಮತ್ತು ಶಿವಶರಣರ ವಚನಗಳಲ್ಲಿ ಈ ಸಂಗತಿಗಳು ಚರ್ವಿತ ಚರ್ವಣವೆನಿಸುವಷ್ಟು ಪುನರುಕ್ತಿಗೊಂಡಿವೆ.

ಮೇಲಿನ ಅಭಿಪ್ರಾಯಗಳನ್ನು ವಿಷದೀಕರಿಸಲು ಎಮರ್ಸನ್‌ನ ಗದ್ಯಪದ್ಯ ಗಳಿಂದಾಯ್ದ ಕೆಲವು ಭಾಗಗಳಿಗೂ ವೇದೋಪನಿಷತ್ತುಗಳು ಮತ್ತು ಗೀತೆಯ ಕೆಲವು ಶ್ಲೋಕಗಳಿಗೂ ಇರುವ ಪರಸ್ಪರ ಹೋಲಿಕೆಯನ್ನು ಉದಾಹರಣೆಗಳ ಸಹಿತ ಪರಿಶೀಲಿಸೋಣ.

'Wood notes' ಕವಿತೆಯ ಕೆಲವು ಸಾಲುಗಳನ್ನು ಉದ್ಧರಿಸಿ, ಈ ಸಾಲು ಗಳಿಗೂ ಈಶಾವಾಸ್ಯೋಪನಿಷತ್ತಿನ ಒಂದು ಶ್ಲೋಕಕ್ಕೂ ಭಗವದ್ಗೀತೆಯ ಹಲವಾರು ಶ್ಲೋಕಗಳಿಗೂ ಇರುವ ಅರ್ಥ ಮತ್ತು ತತ್ವ ಸಾಮ್ಯಗಳನ್ನು ಗುರುತಿಸಬಹುದು. ಎಮರ್ಸನ್‌ನು ಯಾವ ಪರಮಾತ್ಮನನ್ನು ಅಂತಸ್ಥ, ವಿಶ್ವಾತ್ಮ, ಜಗದಂತರ್ಯಾಮಿ ಎಂದು ಕರೆದನೊ ಅವನನ್ನು ಕುರಿತ ಸಾಲುಗಳಿವು:

He is the essence that inquires
He is the axis of the star
He is the sparkle of the spar
He is the heart of every creature
He is the meaning of each feature
And his mind is the sky
Than all it holds more deep, more high.

(ಎಲ್ಲ ಪ್ರಶ್ನೆಗಳ ಸಾರವೂ ಅವನೇ, ಎಲ್ಲ ಚಲನೆಯ ಅಕ್ಷಸೂತ್ರವೂ ಅವನೇ, ಎಲ್ಲ ಹೊಳಪಿನ ಬೆಳಕೂ ಅವನೇ, ಎಲ್ಲ ಜೀವಿಗಳ ಜೀವವೂ ಅವನೇ, ಎಲ್ಲದರ ಅರ್ಥವೂ ಅವನೇ, ಎಲ್ಲವನ್ನು ಒಳಗೊಂಡ ಆಕಾಶದ ಆಳ ಮತ್ತು ಎತ್ತರಕ್ಕಿಂತಲೂ ಮಿಗಿಲಾದ ಮನಸ್ಸೂ ಅವನೇ.) ಇದೇ ಅರ್ಥವನ್ನು ಪಡಿನುಡಿಯುವ ಉಪನಿಷತ್ ಶ್ಲೋಕ ಹೀಗಿದೆ: "ತದೇ ಜತಿ ತನ್ನೈಜತಿ ತದ್ದೂರೆ ತದ್ವದಂತಿಕೇ। ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥

ಎಮರ್ಸನ್‌ನ ಪ್ರಸಿದ್ಧ "The over soul" ಪ್ರಬಂಧದಲ್ಲಿ ಆತ್ಮನಿಗೂ ಲೌಕಿಕಕ್ಕೂ ಇರುವ ಸಂಬಂಧ, ದೇಹ ಮತ್ತು ತೊಡುವ ವಸ್ತ್ರಾಭರಣಗಳಿಗೂ ಇರುವ ಸಂಬಂಧವೆನ್ನುತ್ತ ಹೀಗೆ ಹೇಳುತ್ತಾನೆ. The soul knows only

the soul : The web of events is the flowing robes in which he is clothed." ಇದೇ ಅಭಿಪ್ರಾಯವನ್ನು ಸಮರ್ಥಿಸುವ ಗೀತೆಯ ಶ್ಲೋಕ ಹೀಗಿದೆ. "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ। ನವಾನಿ ಗೃಣ್ಹಾತಿ ನರೋಽಪರಾಣಿ। ತಥಾ ಶರೀರಾಣಿ ವಿಹಾಯ ಜೀರ್ಣಾ। ನ್ಯನ್ಯಾನಿ ಸಂಯಾತಿ ನವಾನಿ ದೇಹೀ॥

ಅಧರ್ಮ ಹೆಚ್ಚಿ ಧರ್ಮಗ್ಲಾನಿಯಾದಾಗ ಪರಮಾತ್ಮನು ಅವತರಿಸಿ ಬಂದು ಧರ್ಮವನ್ನು ಎತ್ತಿ ಹಿಡಿಯುವ ಆಶ್ವಾಸನೆಯುಳ್ಳ ಗೀತೆಯ ಪ್ರಸಿದ್ಧ ಶ್ಲೋಕಕ್ಕೂ ಬಹುಮಟ್ಟಿಗೆ ಇದೇ ಅರ್ಥವನ್ನು ಹೊಂದಿರುವ "The world soul" ಕವಿತೆಯ ಈ ಕೆಳಗಿನ ಸಾಲುಗಳಿಗೂ ಇರುವ ಸಾಮ್ಯತೆಯನ್ನು ಗಮನಿಸಬಹುದು.

When the old world is sterile
And the ages are effete
He will from wrecks and sediments
The fairer world complete;
his cheeks mantle with mirth;
And the unimagined good of men
is yearing at the birth

ಇನ್ನು ಎಮರ್ಸನ್‌ನ ಕೃತಿಗಳ ಕೆಲವು ಸಾಲುಗಳಂತೂ ವೇದ ವೇದಾಂತದ ಸಂದೇಶವನ್ನು ಹೇಗೆ ಪ್ರತಿಧ್ವನಿಸುತ್ತವೆಂಬುದನ್ನು ಕೇಳಬಹುದು.

Into vision where all form
In one only form dissolves
..........................................................
Where good and ill
And joy and moan
Melt into one
There past, present, future, shoot
Triple blossoms from one root.
(Daemonic and the celestial love)

(ಯಾವುದಕ್ಕೆ ವರ್ತಮಾನ, ಭೂತ, ಭವಿಷ್ಯತ್ ಇವು ಮೂರರ ಪರಿವೆ ಇಲ್ಲವೋ, ಯಾವುದಕ್ಕೆ ಸುಖ ದುಃಖ, ನೋವು ನಲಿವುಗಳು ಒಂದೆಯೋ ಅದರಲ್ಲಿ ಸರ್ವವೂ ಲೀನವಾಗುತ್ತದೆ.)



Life is too short to waste
It will soon be dark
Up ! mind thine own aim, and
God speed the mark. (To J. w)

(ಈ ಜೀವನ ದೀರ್ಘವಾದುದಲ್ಲ. ಕತ್ತಲಾವರಿಸುವ ಮುನ್ನ ಬೇಗ ನಿಮ್ಮ ಗುರಿ ಮುಟ್ಟಲು ದೇವರ ಅನುಗ್ರಹ ವಿರಲಿ)

I will attend my proper cares
In rain, or sun or frost (Suum cuique)

(ಚಳಿ ಇರಲಿ ಮಳೆ ಇರಲಿ ಬಿಸಿಲ ಬೇಗೆಯೆ ಇರಲಿ, ನನ್ನ ಕರ್ತವ್ಯದ ಅರಿವು ನನಗಿರಲಿ)

"And this deep power in which we exist and whose beatitude is all accessible to us, is not only self sufficing and perfect in every hour, but the act of seeing and the thing seen, the seen and the spectacle, the subject and the object are one" (The over soul)

(ಯಾವ ಪರಶಕ್ತಿಯ ಅನುಗ್ರಹದಿಂದ ನಾವು ಬದುಕಿದ್ದೇವೆಯೊ ಮತ್ತು ಯಾವುದರ ದಿವ್ಯಾನಂದ ನಮಗೆಲ್ಲ ಎಟುಕ ಬಲ್ಲುದೊ, ಅದು ಎಲ್ಲ ಕಾಲದಲ್ಲಿಯೂ ಸ್ವಪರಿಪೂರ್ಣ ಮಾತ್ರವಲ್ಲದೆ, ನೋಡುವ ಕ್ರಿಯೆ, ನೋಡಿದ, ನೋಡುವ ವಸ್ತು, ನೋಡುವ ವ್ಯಕ್ತಿ, ನೋಡಿದುದು ಮತ್ತು ನೋಡುವುದು ಎಲ್ಲ ಒಂದೇ)

ಮೇಲೆ ಉಲ್ಲೇಖಿಸಲಾದ ಭಾಗಗಳ ಜೊತೆಗೆ ಎಮರ್ಸನ್‌ನೇ ವೇದೋಪನಿಷತ್ತುಗಳ ಮತ್ತು ಗೀತೆಯ ಕೆಲವು ಶ್ಲೋಕಗಳ ಭಾವಾರ್ಥ ನೀಡಿರುವುದು ತುಂಬ ಗಮನಾರ್ಹ.

"In the midst of the sun is the light, in the midst of the light is the truth, and in the midst of the truth is the imperishable being" says the vedas.

"You are fit," (says the supreme krishna to a sage) "To apprehend that you are not distinct from that which I am, than art, and that also is this world, with

its gods and heroes and mankind. men contemplate distinctions, because they are stipefied with ignorance''
(Plato: or the philosopher)

(ಜೀವಾತ್ಮನಿಗೂ ಪರಮಾತ್ಮನಿಗೂ ಯಾವ ಬೇಧವಿಲ್ಲ. ಜೀವಾತ್ಮನೇ ಪರಮಾತ್ಮ. ಪರಮಾತ್ಮನೇ ಜೀವಾತ್ಮ. ಈ ಪ್ರಪಂಚವೂ ಅವನೇ. ಈ ವಿಶ್ವಾತ್ಮನು ಸತ್ಯವೆಂಬ ಬೆಳಕು ಅಷ್ಟೆ.)

### ಎಮರ್ಸನ್‌ನ "ಬ್ರಹ್ಮ"

ಎಮರ್ಸನ್‌ನ ಸುಪ್ರಸಿದ್ಧ ಕವಿತೆ "ಬ್ರಹ್ಮ"ವನ್ನು ಕುರಿತು ಒಂದೆರಡು ಮಾತುಗಳನ್ನು ಬರೆದು ಈ ಲೇಖನವನ್ನು ಮುಗಿಸಬಹುದು. ಎಮರ್ಸನ್ ಬರೆದ ಆಧ್ಯಾತ್ಮ ಜ್ಞಾನಕ್ಕೆ ಸಂಬಂಧಿಸಿದ ಕವಿತೆಗಳಲೆಲ್ಲ ಇದು ಅರ್ಥಪೂರ್ಣವೂ ಮತ್ತು ಯಶಸ್ವಿಯೂ ಆದುದು ಎನ್ನಬಹುದು, ಈ ಕವಿತೆಯ ಉಸಿರು ವೇದಾಂತದ ಸಾರ. ಇದರ ವಸ್ತು ಆತ್ಮನ ಅಮರತ್ವವನ್ನು ಕುರಿತಾದುದು. ಭಾರತೀಯ ಆಧ್ಯಾತ್ಮ ವಿದ್ಯೆಯಲ್ಲಿ ಎಮರ್ಸನ್ ಇಟ್ಟಿದ್ದ ಅಚಲ ನಂಬಿಕೆ ಮತ್ತು ವಿಶ್ವಾಸದ ಫಲವೇ ಈ ಕವಿತೆ. ಇದರ ಮನನ ಭಗವದ್ಗೀತೆಯಲ್ಲಿ ಆತ್ಮನನ್ನು ಕುರಿತು ಶ್ರೀಕೃಷ್ಣನು ನಿರೂಪಿಸುವ ಜ್ಞಾನವನ್ನು ಸ್ಮರಣೆಗೆ ತರುವುದು. ಬಹುಶಃ ಈ ಕವಿತೆ ಗೀತೆಯ ಅನುವಾದವನ್ನು ಓದಿಮುಗಿಸಿದ ಕೂಡಲೆ ಮೂಡಿದ ಸ್ಫೂರ್ತಿಯ ಫಲವೆನ್ನಬಹುದು. ಮೊದಮೊದಲು ಈ ಕವಿತೆ ಅಮೇಕನ್ನರಿಗೆ ಅರ್ಥವಾಗಲೇ ಇಲ್ಲ. ಕಾರಣ ಇದರ ಹಿನ್ನಲೆ ಮತ್ತು ಇದರ ತಾತ್ವಿಕ ವಿವರಣೆ ಅವರಿಗೆ ಸಂಪೂರ್ಣ ಅಪರಿಚಿತವಾಗಿತ್ತು. ನಂತರ ಎಮರ್ಸನ್ ಇದಕ್ಕೆ ವಿವರಣೆ ನೀಡಬೇಕಾಯಿತು. ಬಳಿಕ ಈ ಕವಿತೆ ಅನೇಕ ಎಮರ್ಸನ್ ಅನುಯಾಯಿಗಳಿಗೆ ಮೆಚ್ಚಿನದಾಯಿತಲ್ಲದೆ ಇದರ ಪರಿಣಾಮವಾಗಿ ಅವರು ಕವಿತೆಗೆ ಸ್ಫೂರ್ತಿಯಿತ್ತ ಭಗವದ್ಗೀತೆಯನ್ನು ಅಭ್ಯಾಸ ಮಾಡತೊಡಗಿದರು. ಹೀಗೆಈ ಬ್ರಹ್ಮ ಕವಿತೆ ಎಮರ್ಸನ್‌ನ ಆಧ್ಯಾತ್ಮ ಚಳುವಳಿಗೆ ಪೂರಕವಾಗಿ ಸನಾತನ ಧರ್ಮವೊಂದರ ನಿತ್ಯಸತ್ಯವನ್ನು ಬೇರೊಂದು ನಾಡಿನಲ್ಲಿ ಪ್ರತಿಷ್ಠಾಪನೆಗೊಳ್ಳುವಂತೆ ಮಾಡಿತು. ನಂತರ ಸ್ವಾಮಿ ವಿವೇಕಾನಂದರ ಉತ್ತರಾಧಿಕಾರಿಯಾಗಿ ಅಮೇರಿಕಾದಲ್ಲಿ ಕೆಲಸ ಮಾಡಿದ ಸ್ವಾಮಿ ಅಭೇದಾನಂದರು ಈ ಕವಿತೆಗೆ ವಿಶೇಷ ಅರ್ಥ ನೀಡಿ ಅದನ್ನು ಮತ್ತಷ್ಟು ಪ್ರಚುರಗೊಳಿಸಿದರು. ಓದುಗರ ಅವಲೋಕನಕ್ಕಾಗಿ ಇಲ್ಲಿ "ಬ್ರಹ್ಮ" ಪದ್ಯವನ್ನು ಇಡಿಯಾಗಿ ಕೊಡಲಾಗಿದೆ.



if the red slayer think he slays,
Or if the slain think he is slain,
They know not well the subtle ways
I keep, and pass, and turn again

Far or forgot to me is near
Shadow and sunlight are the same;
The vanquished gods to me appear;
And one to me are shame and fame;

They reckon ill who leave me out;
When me they fly, I am the wings;
I am the doubter and the doubt;
And I the hymn the Brahmin sings

The strong gods pine for my abode,
And pine in vain the sacred seven;
But thou, meek lover of the good!
Find me, and turn they back on heaven.

(**ಭಾವಾರ್ಥ:** ಕೊಲ್ಲುವವ ಕೊಂದೆನೆಂದು, ಕೊಲೆಯಾದವ ಕೊಲ್ಲಲ್ಪಟ್ಟನೆಂದು ತಿಳಿಯುವುದಾದರೆ ನಾನು ಇರುವ, ಹೋಗುವ, ಮತ್ತೆ ತಿರುಗಿ ಬರುವ ಸೂಕ್ಷ್ಮ ಮಾರ್ಗವನ್ನು ಅರಿಯರು. ದೂರದವರು ಮರೆವಿನ ಲೋಕಕ್ಕೆ ಹೋದವರು ಇಬ್ಬರೂ ನನ್ನೊಳಗೇ ಇರುವರು; ಬೆಳಕು ಕತ್ತಲೆಗಳೆರಡೂ ನನಗೆ ಒಂದೇ; ಕಾಣದ ದೇವರುಗಳು ನನಗೆ ಕಾಣುವವರೆ; ಕೀರ್ತಿ ಅಪಕೀರ್ತಿಗಳೆರಡೂ ನನಗೆ ಒಂದೇ. ನನ್ನಿಂದ ದೂರಾದವರು ವೃಥಾ ವ್ಯಥೆಪಡುವರಷ್ಟೆ; ನನ್ನಿಂದ ದೂರ ಹಾರಲು ಅವರಿಗೆ ನಾನೇ ರೆಕ್ಕೆ; ಸಂಶಯ ಪಡುವವರು ಮತ್ತು ಸಂಶಯ ಎರಡೂ ನಾನೇ; ಪ್ರಾಜ್ಞರು ಹಾಡುವ ಗೀತೆಯೂ ನಾನೇ. ನನಗಾಗಿ ಸಕಲ ದೇವರುಗಳೂ ತಪಗೈಯುತ್ತವೆ; ಹಾಗೆಯೇ ಏಳು ಮಂದಿ ಮಹಾತ್ಮರೂ ಸಹ; ಆದರೆ ಸದ್ಭಕ್ತನೂ ವಿಧೇಯನೂ ಆದ ನೀನು ಸ್ವರ್ಗವೆಂಬುದಕ್ಕೆ ಬೆನ್ನು ಮಾಡಿ ನನ್ನನ್ನು ಕಾಣು.)

ಈ ಕವಿತೆ ಭಗವದ್ಗೀತೆಯ ಎರಡನೆಯ ಅಧ್ಯಾಯದ 16ನೇ ಶ್ಲೋಕದಿಂದ 40ನೆಯ ಶ್ಲೋಕದವರೆಗೂ ಗೀತಾಚಾರ್ಯನು ಅರ್ಜುನನಿಗೆ ಬೋಧಿಸುವ ಜ್ಞಾನದ ತಿಳುವಿನ ಸಾರವನ್ನೆ ಯಥಾವತ್ತಾಗಿ ಪ್ರತಿಪಾದಿಸುತ್ತದೆ. ಯಾವುದು ಅಶಾಶ್ವತವೊ ಅದರಿಂದ ಬಿಡುಗಡೆಹೊಂದಿ ಶಾಶ್ವತವಾದುದರೊಂದಿಗೆ ನಮ್ಮನ್ನು ಸೇರುವಂತೆ ಮಾಡಲು ನಮ್ಮನ್ನು ನಾವು ಅನುಗೊಳ್ಳುವುದೇ ಜೀವನದ ಪರಮ ಧ್ಯೇಯ ಎಂಬ ತತ್ವವನ್ನು ಧ್ವನಿಸುತ್ತದೆ. ಅರ್ಜುನನು ಉಭಯ ಸಂಕಟಕ್ಕೆ ಸಿಕ್ಕಿ ತನ್ನ ಅಜ್ಞಾನವನ್ನು ವ್ಯಕ್ತಪಡಿಸಿದಾಗ ಶ್ರೀ ಕೃಷ್ಣನು, ಯಾವುದು ಹತ್ಯೆ, ಯಾವುದು ಹತ್ಯೆಯಲ್ಲ, ಯಾವುದು ತ್ರಿಕಾಲಗಳಲ್ಲೂ ಚಿರವೊ ಅಂತಹ ವಿಶ್ವಾತ್ಮನನ್ನು ಕುರಿತು ಹೇಳುತ್ತಾನೆ.

ಈ ಪದ್ಯದಲ್ಲಿ ಶಬ್ದರೂಪವಾಗಿ ಚಿತ್ರಿತವಾಗಿರುವ ಪರಮಾತ್ಮನೇ ಎಮರ್ಸನ್‌ನ Over Soul (ವಿಶ್ವಾತ್ಮ) ಈ ವಿಶ್ವಾತ್ಮನಿಗೆ ಯಾವುದರ ಅಂಟಾಗಲಿ, ನಂಟಾಗಲಿ, ಸೋಂಕಾಗಲಿ ಇರುವುದಿಲ್ಲ. ಕತ್ತಲು-ಬೆಳಕು ಮತ್ತು ಇಂದೂ-ನಾಳೆಗಳೂ ಒಂದೇ. ಯಾವುದು ಗಮ್ಯವೂ ಅಗಮ್ಯವೂ ಆದುದೊ, ಯಾವುದನ್ನ ಕುರಿತು ವೇದಗಳು ಹಾಡುತ್ತವೊ ಅವನೇ ಈ ಪರಮಾತ್ಮ. ಈ ವಿಶ್ವಾತ್ಮನ ಅರಿವು ಮತ್ತು ಸಾಕ್ಷಾತ್ಕಾರವೇ ಮನುಕುಲದ ಪರಮ ಗುರಿಯಾಗಬೇಕೆಂದು ಕೊನೆಯ ಪದ್ಯದಲ್ಲಿ ತಿಳಿಸುತ್ತ ಅನೇಕರು ಸ್ವರ್ಗವೇ ಸರ್ವಸ್ವವೆಂಬ ತಪ್ಪು ಕಲ್ಪನೆಯನ್ನು ಮಾಡಿಕೊಂಡು ಅದರ ಗಳಿಕೆಗೆ ಜಪ-ತಪಾದಿಗಳನ್ನು ಮಾಡಿದರೂ ದೊರಕುವುದು ಪುನರ್ಜನ್ಮವಲ್ಲದೆ ಮುಕ್ತಿಯಿಲ್ಲವೆಂದು ಎಮರ್ಸನ್ ಸ್ಪಷ್ಟಪಡಿಸುತ್ತಾನೆ. ಈತ ಬೋಧಿಸಿದ ಅನುಭವ ದರ್ಶನದಲ್ಲಿ ಅಚಲ ವಿಶ್ವಾಸವಿರುವವರೆಗೆ ಪುನರ್ಜನ್ಮದ ಸೋಂಕನ್ನು ಬೇಡದ ಆಸ್ತಿಕರಿಗೆ, thou, meek lover if the good, Find me and turn they back on heaven. ಎಂದು ಕರೆಕೊಡುತ್ತಾನೆ. ಹೀಗೆ 'ಬ್ರಹ್ಮ" ಕವಿತೆ ಮುಗಿಯುತ್ತದೆ.

ಕೊನೆಯದಾಗಿ, ಎಮರ್ಸನ್ ಭಾರತೀಯ ಆಧ್ಯಾತ್ಮವಿದ್ಯೆಯ ಸಂಪರ್ಕ ಪಡೆದು ಒಬ್ಬಮಹಾನ್ ಭಕ್ತನಾಗಿ ಭಗವಂತನನ್ನು ಸೇರಲು ತನಗೆ ತಾನೇ ಸೃಷ್ಟಿಸಿಕೊಂಡು ಬೇರೆಯವರೂ ಇಂತಹುದೇ ಪ್ರಯತ್ನವನ್ನು ಮಾಡುವಂತೆ ಪ್ರೇರೇಪಿಸಲು ಹಾಕಿಕೊಟ್ಟ ಮಾರ್ಗವೇ ಅವನ ಅನುಭವದರ್ಶನ; ಭಾರತೀಯ ಜ್ಞಾನ ಸೂರ್ಯನ ಬೆಳಕಿನಲ್ಲಿ ಎಮರ್ಸನ್ ತನ್ನನ್ನು ತಾನು ಪ್ರತ್ಯಕ್ಷಿಸಿಕೊಂಡ. ಇದೇ ಅವನ ಸಹಜ ಜ್ಞಾನಕ್ಕೆ ಅಂತರ್ದೃಷ್ಟಿಗೆ ಕಂಡ ವಿಶ್ವರೂಪು.

# ದೇವಾಲಯ ಮತ್ತು ಮತೀಯ ಪ್ರಜ್ಞೆ

ಎನ್ನೇಬಿ ಮೊಗ್ರಾಲ್ ಪುತ್ತೂರು,
'ಅನಿಲ್‌ನಿವಾಸ" ಮೊಗರಾಲ್ ಪುತ್ತೂರು, ಕಾಸರಗೋಡು 671128 ಕೇರಳ.

ದೇಗುಲವೇ ಸರಸ್ವತೀ ಮಂದಿರ! ಇದು ಈ ಶತಮಾನದ ಅವತಾರ ಪುರುಷ ಶ್ರೀ ನಾರಾಯಣ ಗುರುಗಳ ಅಮೃತವಾಣಿ. ದೇವಾಲಯಗಳು ಮನುಷ್ಯನ ಮನಸ್ಸಿಗೆ ಬೆಳಕು ನೀಡುವ ತೇಜ ಪುಂಜವಾಗಬೇಕು, ಅವನ ಮನಸ್ಸನ್ನು ಅರಳಿಸಿ ಪ್ರಾಜ್ಞತೆಯ ಸೋಪಾನಕ್ಕೇರಿಸುವ ದಿವ್ಯಕಾರ್ಯವನ್ನು ಮಾಡಬೇಕು ಎಂಬರ್ಥದಲ್ಲಿ ಗುರುಗಳು ಆಡಿದ ಈ ಮಾತು ಹಿಂದೂ ಜನತೆಯ ದೃಷ್ಟಿಯಿಂದ ನೋಡುವಾಗ ಇಂದು ಎಷ್ಟರ ಮಟ್ಟಿಗೆ ಅನ್ವಯವಾಗುತ್ತದೆ ಎಂಬುದು ವಿವೇಚಿಸಬೇಕಾದ ವಿಚಾರ.

ನಾವು ದೇವಾಲಯಗಳನ್ನು ಸರಸ್ವತೀ ಮಂದಿರವೆಂಬ ದೃಷ್ಟಿಯಿಂದ ನೋಡುತ್ತೇವೆಯೇ? ಈ ದೇವಾಲಯಗಳು ಹೇಳಬಹುದಾದಂಥಾ ಮೂಲಭೂತ ಮತೀಯ ಶಿಕ್ಷಣಗಳನ್ನು ನಮಗೆ ನೀಡುತ್ತವೆಯೇ? ಬದುಕಿಗೆ ಒಂದು ಶಿಸ್ತಿನ ರೂಪವನ್ನು ಕೊಡುವ ಕೆಲಸ ನಮ್ಮ ದೇವಾಲಯಗಳು ಮಾಡುತ್ತವೆಯೇ? ನಿಜವಾದ ಅರ್ಥದಲ್ಲಿ ಮನುಷ್ಯ ಮನಸ್ಸಿಗೆ ಬೆಳಕು ನೀಡುವ ಕೆಲಸ ನಮ್ಮ ದೇವಾಲಯಗಳಿಂದ ಆಗುತ್ತಿವೆಯೇ

ಮೇಲಿನ ಪ್ರಶ್ನೆಗಳಿಗೆ ನಾವು ನಮ್ಮೊಳಗೆ ಹೇಳಿಕೊಳ್ಳುವ ಉತ್ತರ ಅಂಶಿಕವಾಗಿಯಾದರೂ ನಕಾರಾತ್ಮಕವಲ್ಲದಿದ್ದರೆ ಖಂಡಿತಾ ಅದು ಆತ್ಮವಂಚನೆಗೆ ಸಮ. ನಮ್ಮನ್ನು ನಾವೇ ಹೊಗಳಿ ಉಬ್ಬಿಸಿಕೊಳ್ಳುವುದಕ್ಕೆ ಸಮ. ಸತ್ಯದ ತಲೆಮೇಲೆ ಸುಳ್ಳಿನ ಮೊಳೆ ಜಡಿದ ವಾಸ್ತವಾಂಶವನ್ನು ಹೂತು ಹಾಕುವುದಕ್ಕೆ ಸಮ.

ಯಾಕೆ ಈ ವಾದವನ್ನು ಮುಂದಿಡುತ್ತಿದ್ದೇನೆಂದರೆ ಉಳಿದ ಮತೀಯರಂತೆ ನಮ್ಮ ಮತೀಯರು ದೇವಾಲಯಗಳಿಂದ ಹೆಚ್ಚಿನದೇನನ್ನೂ ಪಡೆದುಕೊಳ್ಳುತ್ತಿಲ್ಲ. ನಮ್ಮ ಜನರ ಬದುಕಿನಲ್ಲಿ ದೇವಸ್ಥಾನಗಳು ಮಹತ್ತರವಾದ ಪಾತ್ರವನ್ನೇನೂ ವಹಿಸುವುದಿಲ್ಲ. ಇದರಿಂದಾಗಿಯೇ ಹಿಂದೂಗಳಿಗೆ ದೇವಾಲಯಗಳು ಅವರ ಬದುಕಿನ ಅವಿಭಾಜ್ಯ ಅಂಗವಾಗಿ ಉಳಿದಿಲ್ಲ. ಆದರೆ ಅದೇ ಕ್ರೈಸ್ತರು ಇಲ್ಲವೇ ಮಹಮ್ಮದೀಯರಲ್ಲಿ ಅವರ ಪ್ರಾರ್ಥನಾಲಯಗಳು ನಿಸ್ಸಂದೇಹವಾಗಿಯೂ ಅವರ ಬದುಕಿನ ಅವಿಭಾಜ್ಯ ಅಂಗವಾಗಿ ಕೆಲಸ ಮಾಡುತ್ತದೆ. ಅವರ ಹುಟ್ಟು-ಸಾವುಗಳು ಇಗರ್ಜಿ ಮಸೀದಿಗಳೊಂದಿಗೆ ಬೆಸೆದುಕೊಂಡಿವೆಯೇ ವಿನಃ ಯಾವುದೇ ಅರ್ಥದಲ್ಲೂ ಅದರಿಂದ ಹೊರತಾಗಿಲ್ಲ, ಆದಿಯಿಂದ ಅಂತ್ಯದವರೆಗೆ ಪ್ರಾರ್ಥನಾಲಯಗಳೊಂದಿಗೆ ತಳುಕು ಹಾಕಿ-ಕೊಳ್ಳದ ಲೌಕಿಕ ಬದುಕೊಂದನ್ನು ಕಲ್ಪಿಸಿಕೊಳ್ಳುವುದೂ ಅವರಿಂದ ದುಸ್ಸಾಧ್ಯ



ಓರ್ವ ಕ್ರಿಶ್ಚಿಯನ್ ಇಲ್ಲವೇ ಮುಸಲ್ಮಾನನಿಗೆ ಇಗರ್ಜಿ-ಮಸೀದಿಗಳು ಆರಾಧನಾಲಯ ವಷ್ಟೇ ಅಲ್ಲ, ಅವನ ಸರ್ವತೋಮುಖ ಆಧ್ಯಾತ್ಮಿಕ ಬೆಳವಣಿಗೆಯ ಆಧಾರ ಕೇಂದ್ರವೂ ಹೌದು.

ಗರ್ಭಸ್ಥ ಶಿಶುವಿಗೆ ತನ್ನ ತಾಯಿಯೊಂದಿಗಿರುವ ಹೊಕ್ಕುಳ ಬಳ್ಳಿ ಸಂಬಂಧ ದಂಥಾ ಅಭೇದ್ಯವಾದ ನಂಟೊಂದೂ ಅವರಿಗೆ ದೇವಾಲಯದ ಜೊತೆಯಾಗಿದೆಯಾದರೆ ಅದಕ್ಕೆ ಅವರ ಮತೀಯ ಚೌಕಟ್ಟೇ ಮೂಲ ಕಾರಣ. ಪ್ರತಿಯೊಬ್ಬ ವ್ಯಕ್ತಿಯೂ ಆ ಚೌಕಟ್ಟಿಗೆ ಬದ್ಧನಾಗಿರಬೇಕೆಂದು ಆ ಮತಗಳು ಖಡಾ ಖಂಡಿತವಾಗಿ ಹೇಳುತ್ತವೆ. ಈ ನಿಟ್ಟಿನಿಂದ ನೋಡುವಾಗ ಅವರಿಗಿರುವ ಮತೀಯಸ್ವಾತಂತ್ರ್ಯ ಸೀಮಿತವಾದದ್ದು. ಅದೇ ಸಂದರ್ಭದಲ್ಲಿ ಹಿಂದುಗಳಿಗಿರುವ ಮತೀಯಸ್ವಾತಂತ್ರ್ಯ ಅಪಾರವಾದದ್ದು ಅವರಿಗೆ ಕಟ್ಟುಪಾಡುಗಳಿಲ್ಲ.

ಈ ರೀತಿಯಲ್ಲೇ ಇರಬೇಕು ಎಂದು ಬಲವಂತ ಪಡಿಸುವಂಥಾ ನೀತಿ ನಿಬಂಧನೆ ಗಳಿಲ್ಲ. ಒಂದು ಚೌಕಟ್ಟಿನೊಳಗೆ ತನ್ನನ್ನು ಕೂಡಿಹಾಕಿಕೊಳ್ಳಬೇಕಾದ ಒತ್ತಾಯ ಒತ್ತಡಗಳಿಲ್ಲ. ಕ್ರಿಶ್ಚಿಯನ್ ಇಲ್ಲವೇ ಮಹಮ್ಮದೀಯರಲ್ಲಿ ಇಂಥಿಂಥಾ ದಿನ ಇಂಥಿಂಥಾ ಹೊತ್ತಲ್ಲಿ ಅನುಯಾಯಿಗಳು ದೇವಾಲಯಕ್ಕೆ ಬಂದಿರಬೇಕೆಂಬ ನಿಷ್ಕರ್ಷೆಯಿದೆ. ಆದರೆ ಹಿಂದೂಗಳಿಗೆ ಈ ತರದ ಯಾವುದೇ ಬದ್ಧತೆಗಳಿಲ್ಲ. ಯಾವಾಗ ಬೇಕಿದ್ದರೂ ಅವರು ದೇವಾಲಯಕ್ಕೆ ಬರಬಹುದು, ಹೋಗಬಹುದು. ದೇವ ಮಂದಿರಗಳು ಹಿಂದೂಗಳ ಬದುಕಿನ ಅವಿಭಾಜ್ಯ ಅಂಗವಾಗದಿರಲಿ ಈ ತರದ ಮುಕ್ತ ಸ್ವಾತಂತ್ರ್ಯವೇ ಪ್ರಧಾನ ಕಾರಣ ಎಂದರೂ ತಪ್ಪಾಗಲಾರದು. ಬೇರಾವುದೇ ಮತಗಳಲ್ಲೂ ಕಾಣದ ಈ ಸ್ವಾತಂತ್ರ್ಯ ಹಿಂದೂ ಧರ್ಮಕ್ಕೆ ಮಾತ್ರ ಸೇರಿದ ವೈಶಿಷ್ಟ್ಯತೆಯೆನ್ನಬಹುದು. ಈ ಸ್ವಾತಂತ್ರ್ಯ ಅಭಿನಂದನೀಯವೂ ಸರ್ವಥಾ ಸ್ವಾಗತಾರ್ಹವೂ ಅತ್ಯಂತ ಅಪೇಕ್ಷಣೀಯವೂ ಹೌದು. ಆದರೆ ಅದೇ ವೇಳೆ ಈ ಸ್ವಾತಂತ್ರ್ಯವನ್ನು ತುಸು, "ಅತಿ"ಯೇ ಎನ್ನಿಸುವಷ್ಟು ಉಪಯೋಗಿಸಿಕೊಂಡು ನಾವು ದೇವಾಲಯಗಳಿಂದ ಹೆಚ್ಚು ಹೆಚ್ಚು ದೂರಾಗುತ್ತಿದ್ದೇವೆಯೇ ಎಂಬ ಸಹಜ ಪ್ರಶ್ನೆಯತ್ತ ಕುರುಡು ಮನೋಭಾವ ತಾಳಿ ಬೆನ್ನ ತಿರುಗಿಸಿ ಕುಳಿತುಕೊಳ್ಳುವುದು ಖಂಡಿತಾ ಸಮಂಜಸವೆನಿಸುವುದಿಲ್ಲ.

ಸರ್ವರೂ ಬಲ್ಲಂತೆ ಹಿಂದೂ ಮತ್ತು ಹಿಂದೂಯೇತರ ಧರ್ಮಗಳ ನಡುವೆ ಮುಖ್ಯ ವ್ಯತ್ಯಾಸವೊಂದಿದೆ ಹಿಂದೂಯೇತರ ಧರ್ಮಗಳು ಆಯಾ ಕಾಲಘಟ್ಟದಲ್ಲಿ ಭೂಜಾತರಾದ ಅವತಾರ ಪುರುಷರ ಇಲ್ಲವೇ ಪ್ರವಾದಿಗಳ ಕೊಡುಗೆಯಾಗಿ ಹುಟ್ಟಿ ಕೊಂಡಂಥವುಗಳು, ಮೇಲೆ ಹೇಳಿದಂಥಾ ಕೆಲವೊಂದು ಲಿಖಿತ ಸಂಹಿತೆಗಳು ಅವಕ್ಕೆ ಮೂಡಿಬರಲು ಇದೇ ಮೂಲ ಕಾರಣವೂ ಹೌದು.

ಆದರೆ ಹಿಂದೂ ಧರ್ಮ ಯಾವನೇ ಅವತಾರ ಪುರುಷನ ಇಲ್ಲವೆ ಪ್ರವಾದಿಯ ಕೊಡುಗೆಯಾಗಿ ಹುಟ್ಟಿಕೊಂಡದಲ್ಲ. ಅದೊಂದು ಸನಾತನ ಸಂಸ್ಕೃತಿ. ಕಾಲಾನುಕ್ರಮದಲ್ಲಿ ಅದೊಂದು ಮತದ ರೂಪ ಪಡೆಯಿತು ಅಷ್ಟೆ. ಭಾರತದ ಮಣ್ಣಲ್ಲಿ ಹುಟ್ಟಿದ ಯಾವುದೇ ವ್ಯಕ್ತಿಯ ರಕ್ತದಲ್ಲೂ ಈ ಮಹತ್ತಾದ ಸಂಸ್ಕೃತಿ ಒಳವಳಿಯಾಗಿಯೇ ಸೇರಿಕೊಂಡಿದೆ ಎಂದರೆ ಯಾರಿಂದಲೂ ಅಲ್ಲಗಳೆಯಲಾಗದು.

ಹಿಂದೂ ಧರ್ಮ ಈ ರೀತಿ ಮಹತ್ತಾದ ಸಂಸ್ಕೃತಿಯ ಆಗರವಾದ್ದರಿಂದ ಇತರ ಸಂಘಟಿತ ಮತಗಳಂತೆ, ಇದೂ ಒಂದು ಮತವಾಗಿ "ಸಾಂಘಿಕ ಶಕ್ತಿ" ಯಾಗಿ ರೂಪಾಂತರ ಹೊಂದದೆ ಉಳಿಯಿತು. ಧಾರ್ಮಿಕ ಕಟ್ಟುಪಾಡುಗಳಿಲ್ಲದ ಮುಕ್ತ ಸ್ವಾತಂತ್ರ್ಯದ ಕದವನ್ನು ತನ್ನ ಅನುಯಾಯಿಗಳ ಮುಂದೆ ಅದು ತೆರೆದುಕೊಟ್ಟಿತು. ಈ ಸ್ವಾತಂತ್ರ್ಯವನ್ನು ಮೆಲ್ಲುವ ಭರದಲ್ಲಿ ನಾವು ಸರಿಯಾದ ಅರ್ಥದ ಧಾರ್ಮಿಕ ಪ್ರಜ್ಞೆಯನ್ನು ಮೂಡಿಸಿಕೊಳ್ಳುವಲ್ಲಿ, ಮತೀಯ ಶಿಕ್ಷಣವನ್ನು ಗಳಿಸಿಕೊಳ್ಳುವಲ್ಲಿ ಸಫಲರಾಗಿದ್ದೇವೆಯೇ ಅಥವಾ ಹಿಂದೆ ಬಿಟ್ಟದ್ದೇವೆಯೆ ಎಂಬುದು ಇಲ್ಲಿನ ಪ್ರಶ್ನೆ.

ಹಿಂದೂ ಧರ್ಮದ ಸಾರ ಸರ್ವಸ್ವ ವೆಂದು ವಿಶ್ವವೇ ಅಂಗೀಕರಿಸಿರುವ ಭಗವದ್ಗೀತೆಯ ಕೆಲವೇ ಕೆಲವು ಸಾಲುಗಳಾದರೂ ನಮ್ಮಲ್ಲಿ ಎಷ್ಟು ಮಂದಿಗೆ ಗೊತ್ತು? ಗೊತ್ತಿದ್ದರೂ ಆ ಸಾಲುಗಳ ಅರ್ಥ-ಅಂತರಾರ್ಥ ಎಷ್ಟು ಮಂದಿಗೆ ಗೊತ್ತು? ಈ ಹೇಳುವ ನನಗೇ ಗೀತೆ ವೇದೋಪನಿಷತ್ತುಗಳ ಒಂದೇ ಒಂದು ಸಾಲು ಗೊತ್ತಿಲ್ಲ-ದಿದ್ದರೆ, ಗೊತ್ತಿರುವ ಸಾಲಿನ ಸಾರ-ಅಂತಸ್ಸಾರ ಗೊತ್ತಿಲ್ಲದಿದ್ದರೆ, ಖಂಡಿತಾ ಅದು ನನ್ನ ತಪ್ಪಲ್ಲ, ವ್ಯವಸ್ಥೆಯ ತಪ್ಪು. ಸರಿಯಾದ ರೀತಿಯ-ಧಾರ್ಮಿಕ ಶಿಕ್ಷಣವನ್ನು ಕಲ್ಪಿಸುವ ಅವಕಾಶವನ್ನು ಒದಗಿಸದ ಮತೀಯ ತಳಹದಿಯ ತಪ್ಪು.

ತಪ್ಪದೆ ಪ್ರಾರ್ಥನಾಲಯಕ್ಕೆ ಹೋಗುವುದನ್ನು ರೂಢಿಸಿಕೊಂಡ ಕ್ರಿಶ್ಚಿಯನ್ ಇಲ್ಲವೇ ಮುಸ್ಲಿಂ ಬಾಲಕನೊಬ್ಬ ಸಣ್ಣ ಪ್ರಾಯದಲ್ಲೇ ತನ್ನ ಧರ್ಮಕ್ಕೆ ಸೇರಿದ, ತನ್ನ ಧರ್ಮಗ್ರಂಥಕ್ಕೆ ಸೇರಿದ ಕೆಲವೊಂದು ಮೂಲಭೂತ ವಿಷಯಗಳನ್ನಾದರೂ ತಿಳಿದುಕೊಂಡಿರುತ್ತಾನೆ. ಅಂಥಾ ವ್ಯವಸ್ಥೆ ಅವರಲ್ಲಿದೆ. ಏಕನಿಷ್ಠೆಯಿಂದ ಪ್ರಾರ್ಥನಾಲಯಗಳಲ್ಲಿ ಬಿಟ್ಟು ಸೇರುವ ಅನುಯಾಯಿಗಳ ಮುಂದೆ ಮತಪುರೋಹಿತ ಮತೀಯ ಪ್ರಜ್ಞೆ ಬಗ್ಗೆ ಮನಮುಟ್ಟುವಂತೆ ಮಾತನಾಡುತ್ತಾನಲ್ಲದೆ, ತಮ್ಮ ಧರ್ಮದ ಪವಿತ್ರ ಗ್ರಂಥಗಳ ಅಂತ್ಯಸಾರವನ್ನು ಸೂಕ್ಷ್ಮವಾಗಿ ಮನವಟ್ಟು ಮಾಡಿಕೊಡುತ್ತಾನೆ. ತನ್ನ ಧರ್ಮೀಯರ ಸಾಮಾಜಿಕ ಬದುಕಿನಲ್ಲಿ ದೇವಾಲಯಕ್ಕೆ ಮಹತ್ವದ ಸ್ಥಾನವಿರುವಂತೆ ಆತ ನೋಡಿಕೊಳ್ಳುತ್ತಾನೆ. ಅದೇ ಹಿಂದುವೊಬ್ಬ ಅಂಬೆಗಾಲಿಡ ತೊಡಗಿದಂದಿನಿಂದ ಕೊನೆಯುಸಿರೆಳೆವ ತನಕ ದೇವಸ್ಥಾನಕ್ಕೆ ಹೋಗುತ್ತಿದ್ದರೂ, ದೇವಸ್ಥಾನಕ್ಕೆ ಸಂಬಂಧಪಟ್ಟ ಆಚಾರ ವಿಚಾರಗಳನ್ನಾಗಲೀ ದೇವನಿಷ್ಠೆಗಳನ್ನಾಗಲೀ ತನ್ನ



ಧರ್ಮದ ಶ್ರೇಷ್ಠತೆಯನ್ನಾಗಲೀ ತನ್ನ ಧರ್ಮಗ್ರಂಥಗಳ ವೇದ ಪುರಣೇತಿಹಾಸಗಳ ಬಗ್ಗೆಯಾಗಲಿ ಏನೊಂದನ್ನು ಅರಿತುಕೊಳ್ಳದೆ ಅಜ್ಞನಾಗಿಯೇ ಉಳಿದುಬಿಡುತ್ತಾನೆ. ಇದಕ್ಕೇನುಕಾರಣ? ಯಾವ ಲೋಪದ ಫಲಶೃತಿ ಇದು? ನಾವು ವಿವೇಚಿಸ ಬೇಕು.

ನಮ್ಮ ಪಾಲಿಗೆ ದೇವಾಲಯಗಳು ಆತ್ಮೋನ್ನತಿಯ ಅಭಯ ಕೇಂದ್ರವಾಗದೆ, ಪ್ರಾಜ್ಞತೆಯ ಸೋಪಾನವೇರುವ ಏಣಿ ಮೆಟ್ಟಿಲಾಗದೆ ಕೇವಲ 'ಸಂಕಟ ಬಂದಾಗ ವೆಂಕಟರಮಣ' ಎಂದು ಬೇಡಿಕೊಳ್ಳುವ ಅಂತಿಮ ಅಭಯತಾಣವಾಗುವುದು ನಿಜಕ್ಕೂ ಖೇದಕರ ಸಂಗತಿ. ದೇವಾಲಯಗಳನ್ನು ನಾವು ನಮ್ಮ ಧಾರ್ಮಿಕ ಪ್ರಗತಿಗೆ ಪೂರಕವಾಗಿ ಕಂಡುಕೊಳ್ಳಬೇಕೇ ವಿನಃ ನಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಹರಿಕೆ ರೂಪದಲ್ಲಿ ಕಂಟ್ರಾಟು ಒಪ್ಪಿಸುವ ಉಪನೆಲೆಯಾಗಿ ಖಂಡಿತಾ ಅಲ್ಲ. ಒಂದುಕಾಲದಲ್ಲಿ ನಮ್ಮ ದೇವಾಲಯಗಳು ಕಲೆ-ಸಂಸ್ಕೃತಿಯ ನೆಲೆ ಬೀಡಾಗಿತ್ತೆಂದು ಇತಿಹಾಸಗಳು ಹೇಳುತ್ತವೆ. ಆದರೆ ಇಂದು?

ಕಾಲಾನುವರ್ತಿಯಾದ ಬದಲಾವಣೆಗಳಿಗೆ ಓಗೊಡದೆ ಕೆಲವೊಂದು ಪದ್ಧತಿಗಳನ್ನು ಮರ್ಕಟ ಮುಷ್ಟಿಯಿಂದ ಬಿಗಿಹಿಡಿದುಕೊಂಡು ಮುಂದುವರಿಯುವುದು ಯಾವುದೇ ಧರ್ಮವನ್ನಾದರೂ ದುರ್ಬಲಗೊಳಿಸೀತೇ ವಿನಃ ಸಬಲಗೊಳಿಸದು. ಮೇಲ್ನೋಟಕ್ಕೆ ತೀರಾ ಬಾಲಿಶವೆನ್ನಬಹುದಾದರೂ, ನಮ್ಮ ಯುವಜನರನ್ನು ದೇವಾಲಯದಿಂದ ಸ್ವಲ್ಪ ಮಟ್ಟಿಗಾದರೂ ದೂರವಿರಿಸುವ ಪದ್ಧತಿಯೊಂದಿಗೆ ಶರ್ಟ್ ಬಿಚ್ಚುವುದು! ದೇವಸ್ಥಾನದೊಳಕ್ಕೆ ಪ್ರವೇಶಿಸಬೇಕಿದ್ದರೆ ಗಂಡಸರು ಶರ್ಟ್ ಬಿಚ್ಚಲೇ ಬೇಕು. ಅದು ಪುಟ್ಟಮಗುವಿನಿಂದ ತೊಡಗಿ ಹಣ್ಣು ಹಣ್ಣು ಮುದುಕನಿಗೂ ಬಾಧಕ. ಆದರೆ ಹೆಂಗಸರಿಗೆ ಈ ನಿಬಂಧನೆಯಿಲ್ಲ. ಯಾವ ಕಾರಣದಿಂದ ತಾನು ಶರ್ಟ್ ಕಳಚಬೇಕೆಂಬುದು ಬಹುಪಾಲು ಹಿಂದೂವಿಗೂ ಗೊತ್ತಿಲ್ಲ. ಆದರೆ ಆತ ವ್ಯವಸ್ಥೆಯ ಒತ್ತಡಕ್ಕೆ ಮಣಿದು ಅದನ್ನು ಅನುಸರಿಸುತ್ತಾನೆ. ದೇವರ ದರ್ಶನ ಪಡೆಯುವಾಗಲೂ ಅವನ ಮನದಲ್ಲಿ ಗುಂಗಿಹುಳುವಿನಂತೆ ಅನುಮಾನವೊಂದು ಕೊರೆಯುತ್ತಲೇ ಇರುತ್ತದೆ. ಯಾಕಾಗಿ ತನ್ನ ಶರ್ಟ್ ಬಿಚ್ಚಿಸಿದರು? ಅದರ ಹಿಂದೆ ಅಡಕವಾಗಿರುವ ಸಾರವೇನು? ಅವನ ಸಂಶಯ ಸಂಶಯವಾಗಿಯೇ ಉಳಿಯುತ್ತದೆ. ಅದನ್ನು ಬಗೆಹರಿಸಿ ಕೊಡುವವರು ಯಾರೂ ಇಲ್ಲ. ಸ್ವತಃ ಬಗೆಹರಿಸಿಕೊಳ್ಳುವ ವ್ಯವಸ್ಥೆಯೂ ಅವನ ಮುಂದಿಲ್ಲ. ಕೊನೆಗೆ ಅವನು ಮಣ್ಣಾಗುವಾಗಲು ತನ್ನ ಸಂಶಯವನ್ನು ಜೊತೆಗೇ ಕೊಂಡೊಯ್ಯುತ್ತಾನೆ. ಆ ಸಂಶಯಕ್ಕೆ ಯಾವತ್ತೂ ಮೋಕ್ಷ ಸಿಗದ ಪ್ರೇತಾತ್ಮದ ಸ್ಥಿತಿ.

ಶರ್ಟ್ ಬಿಚ್ಚುವ ಪದ್ಧತಿಗೆ ಆಧಾರವಾದ ಕಾರಣವೊಂದನ್ನು ನಮ್ಮ ವ್ಯವಸ್ಥೆ ಹೀಗೆ ಸಮರ್ಥಿಸುತ್ತದೆ.

ಪೂಜೆಗೈಯ್ಯಲ್ಪಡುವ ವಿಗ್ರಹದಿಂದ ಬಹಿರಾಸ್ಫುರಣಗೊಳ್ಳುವ ದಿವ್ಯಪ್ರಭೆ ಶರೀರವನ್ನು ಸ್ಪರ್ಶಿಸಿದಲ್ಲಿ ಅದು ಶರೀರಕ್ಕೂ ಮನಸ್ಸಿಗೂ ನವಚೈತನ್ಯವನ್ನು ನೀಡು. ತ್ತದೆ. ಆದೇ ಅರಿವೆ ತೊಟ್ಟಲ್ಲಿ ಆ ಪ್ರಭೆ ಶರೀರವನ್ನು ತಟ್ಟುವ ಅವಕಾಶ ತಪ್ಪುತ್ತದೆ ಅಂತ ಹೀಗನ್ನುವಾಗ ಸಹಜವಾಗಿಯೇ ಒಂದು ಪ್ರಶ್ನೆಯೇಳುತ್ತದೆ..................... ಈ ನವಚೈತನ್ಯ ನಮ್ಮ ಹೆಂಗಸರಿಗೆ ಬೇಡವೆ ? ಹೋಗಲಿ ಬಿಡಿ, ದೈಹಿಕವಾಗಿ ಕೆಲವೊಂದು ಪ್ರತ್ಯೇಕತೆಗಳನ್ನು ಮುಂದಿಟ್ಟುಕೊಂಡು ನಾವು ಈ ತರ್ಕದಿಂದ ಅವರನ್ನು ಹೊರತುಪಡಿಸಿದರೂ ಬೇರೊಂದು ಪ್ರಶ್ನೆ ನಮ್ಮ ಮುಂದೆ ರೂಪು ತಳೆಯುತ್ತದೆ. ದೇಹಾದ್ಯಂತ ಶಾಲು ಹೊದ್ದುಕೊಂಡು ದೇವಸ್ಥಾನದೊಳಕ್ಕೆ ಬರುವವರಿದ್ದಾರೆ. ಅದು ನಿವೇದ್ಯವೂ ಅಲ್ಲ, ಅವರನ್ನು ಯಾರೂ ತಡೆಯುವವರೂ ಇಲ್ಲ. ಇಲ್ಲೇಳುವ ಮುಖ್ಯ ಪ್ರಶ್ನೆಯೆಂದರೆ, ವಿಗ್ರಹದಿಂದ ಹೊರಹೊಮ್ಮುವ ದಿವ್ಯಪ್ರಭೆ ಈ ಶಾಲು ಹೊದ್ದವರ ಮೈತಟ್ಟುತ್ತದೆಯೇ ? ಶಾಲು ಶರ್ಟು ಎರಡೂ ಬಟ್ಟೆಯೇ ಅಲ್ಲವೇ ? ಒಂದೇ ಬಗೆಯ ವಸ್ತ್ರ ' ಶರ್ಟ "ನ ಆಕಾರ ತಳೆದ ಮಾತ್ರಕ್ಕೆ ಅದು ಅಸ್ಪೃಶ್ಯವಾಗುವುದು ಹೇಗೆ ? ಈ ರೀತಿಯ ವೈರುಧ್ಯಗಳಿಂದ ಕೂಡಿದ ವ್ಯವಸ್ಥೆಗೆ ಉತ್ತರ ಹೇಳುವವರು ಯಾರು ?

ಹಿಂದಿನ ಕಾಲದಲ್ಲಿ ಬರೇ ಕೌಪೀನವನ್ನು ತೊಟ್ಟುಕೊಂಡು ದೇ ವಾ ಲ ಯ ಪ್ರವೇಶಿಸಬೇಕಿತ್ತಂತೆ. ಕೇವಲ ಚಡ್ಡಿ ತೊಟ್ಟುಕೊಳ್ಳುವ ಅವಕಾಶವೂ ಅಂದು ಇರಲಿಲ್ಲವಂತೆ. ಇಂದು ಚಡ್ಡಿ ಹೋಗಿ ಜೀನ್ಸ ಪ್ಯಾಂಟು ಕೂಡಾತೊಟ್ಟುಕೊಂಡು ಒಳಗೆ ಪ್ರವೇಶಿಸಬಹುದೆಂಬ ಸ್ಥಿತಿ ಬಂದಿದೆ. ಅಂದಮೇಲೆ ಈ ಶರ್ಟಿಗೆ ಮಾತ್ರ ಯಾಕೆ ಈ ಅಸ್ಪೃಶ್ಯತೆ? ಬಲ್ಲವರು ಇದರ ಮೂಲಕಾರಣ ವಿವರಿಸಲು ಮುಂದೆ ಬರಬೇಕು. ಈ ಬಗ್ಗೆ ಅಜ್ಞರಾಗಿರುವ ನನ್ನಂಥವರ ಮುಂದೆ ಕೈದೀವಿಗೆ ಹಿಡಿಯುವ ಸತ್ಕಾರ್ಯ ಮಾಡಬೇಕು. ಯಾವ ಜನತೆಯ ಸಂಶಯವನ್ನು ದೂರೀಕರಿಸಿ ಅವರನ್ನು ಇನ್ನೂ ಇನ್ನೂ ದೇವಾಲಯದ ಹತ್ತಿರ ತರುವ ಕೆಲಸ ಮಾಡಬೇಕು.

ಯುವಜನರನ್ನು ದೈವಿಕ ಕಾರ್ಯಗಳತ್ತ ಸೆಳೆಯುವಲ್ಲಿ ನಮ್ಮ ಪುರೋಹಿತ ವೃಂದಕ್ಕಿರುವ ಪಾತ್ರ ಕಿರಿದೇನಲ್ಲ. ನಮ್ಮ ಯುವಪೀಳಿಗೆಯಲ್ಲಿ ಕಂಡುಬರುವ ಧಾರ್ಮಿಕ ಶಿಕ್ಷಣದ ಕೊರತೆಯನ್ನು ನೀಗಿಸಿ ಅವರಲ್ಲಿ ಆತ್ಮವಿಶ್ವಾಸ, ಧರ್ಮ ಪ್ರಜ್ಞೆ ಹಾಗೂ ಕರ್ತವ್ಯ ಪರಿಣೆಯತೆ ಮೂಡಿಸುವ ಕೆಲಸ ನಮ್ಮ ದೇವಾಲಯ ಮತ್ತು ಪುರೋಹಿತ ವೃಂದದಿಂದ ಆಗಬೇಕು. ಅಂಥ ಒಂದು ವ್ಯವಸ್ಥೆ ನಮ್ಮಲ್ಲಿ ರೂಪ ತಳೆದು ರೂಢಿಗತವಾಗಬೇಕು.

ಮಹಾನ್ ಸಂಸ್ಕೃತಿಯ ವಕ್ತಾರರೆಂದು ಹೇಳಿ ಹೆಮ್ಮೆ ಪಟ್ಟುಕೊಳ್ಳುತ್ತಿರುವ ಹಿಂದೂ ಜನತೆಯ ಸಿಂಹಪಾಲು ಆ ಸಂಸ್ಕೃತಿಯ ಆಳ-ಅಗಲ-ವ್ಯಾಪ್ತಿಯನ್ನು ಅರಿತುಕೊಳ್ಳದೆ ಅಜ್ಞರಾಗಿಯೇ ಉಳಿಯುವ ದಮನೀಯಾವಸ್ಥೆಗೆ ವಿರಾಮ ಹಾಕುವ ಕೆಲಸ, ಬೆಳಗಿಸುವ ಮಹತ್ಕಾರ್ಯ ನಮ್ಮ ಆಚಾರ್ಯರುಗಳಿಂದ ಆಗಬೇಕು. ●

ಸಿದ್ರಗಂಗಾ



## ಭಾಷಾ ಬೋಧನೆ ಮತ್ತು ಕಲಿಕೆಯಲ್ಲಿನ ಒಂದು ಮುಕ್ತ ಚರ್ಚೆಗಾಗಿ ಒಂದು ವೇದಿಕೆ

ನಮ್ಮ ಶಿಕ್ಷಣದ ಪ್ರಾಥಮಿಕ ಹಂತದ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಕನ್ನಡ ಭಾಷಾ ಕಲಿಕೆಯಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇವು ವೈಯಕ್ತಿಕ ಮತ್ತು ಸಾರ್ವತ್ರಿಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಮಾರ್ಗಗಳಿಲ್ಲದೆ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ದಿನೆ ದಿನೇ ಸಾಕಷ್ಟು ಕಷ್ಟಗಳನ್ನು ಎದುರಿಸುತ್ತಿದ್ದಾರೆ.

ಈ ಬಗೆಯ ಸಮಸ್ಯೆಗಳನ್ನು ಪರಸ್ಪರ ಹಂಚಿಕೊಳ್ಳಲು, ಚರ್ಚಿಸಲು ಮತ್ತು ಸಾಧ್ಯವಾದಷ್ಟು ಆ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಕನ್ನಡ ವಿಶ್ವವಿದ್ಯಾಲಯ ವೇದಿಕೆಯೊಂದನ್ನು ಪ್ರಾರಂಭಿಸುತ್ತಿದೆ. ಈ ವೇದಿಕೆಯಡಿಯಲ್ಲಿ ಸಮಸ್ಯೆಗಳ ಪರಸ್ಪರ ಚರ್ಚೆಗಾಗಿ ಪತ್ರಿಕೆಯೊಂದನ್ನು ಸಹ ತರುವಯೋಜನೆ ಹಾಕಿಕೊಂಡಿದೆ.

ಈ ವೇದಿಕೆಗೆ ಪ್ರಾಥಮಿಕ ಶಾಲೆಯ ಅಧ್ಯಾಪಕರು, ಭಾಷಾ ಬೋಧನೆಯಲ್ಲಿ ಮತ್ತು ವಿದ್ಯಾರ್ಥಿಗಳು ಕಲಿಕೆಯಲ್ಲಿ ಎದುರಿಸುತ್ತಿರುವ ವಿವಿಧ ಸಮಸ್ಯೆಗಳ ಬಗೆಗೆ ಬರೆದು ಕಳಿಸಲು ಮುಕ್ತ ಅವಕಾಶವಿದೆ. ಸಮಸ್ಯೆ ವೈಯಕ್ತಿಕವಷ್ಟೆ ಆಗಿರದೇ ಸಾರ್ವತ್ರಿಕವೂ ಆಗಿರುತ್ತವೆ. ಅಂಥ ಸಮಸ್ಯೆಗಳ ಬಗ್ಗೆ ಚರ್ಚೆ ನಡೆದಾಗ ಸಾಕಷ್ಟು ಸೂಕ್ತವಾದ ಪರಿಹಾರ ಸಿಕ್ಕಬಹುದು. ಇದರಿಂದ ಅಧ್ಯಾಪಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಕಿಂಚಿತ್ತಾದರೂ ಉಪಯೋಗವಾಗುತ್ತದೆಂಬ ನಂಬಿಕೆ ಇದೆ

ಪ್ರತಿಯೊಬ್ಬ ಅಧ್ಯಾಪಕರೂ ಈ ವೇದಿಕೆಯಲ್ಲಿ ಭಾಗವಹಿಸಬೇಕಾಗಿ ಕೋರುತ್ತೇವೆ. ತಮ್ಮ ಸಮಸ್ಯೆಗಳನ್ನು ಕಳುಹಿಸಬೇಕಾದ ವಿಳಾಸ :
ಭಾಷಾ ವಿಭಾಗ, ಕನ್ನಡ ವಿಶ್ವವಿದಾಲಯ, ಹಂಪಿ-583200.

ಕೃಪೆ: ಕನ್ನಡ ವಿಶ್ವವಿದ್ಯಾನಿಲಯ
ಹಂಪಿ.

# ಕಾರಣ ಪುರುಷ ಬಸವೇಶ್ವರ—ಭಾಗ 6

ಕೆಳೆದ ಸಂಚಿಕೆಯಿಂದ

—ಡಾ|| ಎಲ್. ಆರ್. ಹೆಗಡೆ, ಸಿದ್ದಾಪುರ, ದಕ್ಷಿಣ ಕನ್ನಡ ಜಿಲ್ಲೆ.

## ಆತ್ಮ ವಿಕಾಸದ ಹಂತಗಳು

ತನ್ನ ಆತ್ಮ ವಿಕಾಸದ ಹಿಂದಿನ ಹಂತಗಳನ್ನು ಬಸವಣ್ಣನು ತನ್ನ ವಚನಗಳಲ್ಲಿ ಗುರುತಿಸಿದಂತೆ ಇನ್ನಾವ ವಚನಕಾರರೂ ಅವರ ಕುಂದುಕೊರತೆಗಳನ್ನು ವಿವರಿಸುತ್ತ ಅದಕ್ಕಾಗಿ ಪರಿತಪಿಸುತ್ತ ಶುದ್ಧ ಭಕ್ತರಾಗುವುದಕ್ಕೆ ಹೆಣಗುತ್ತಿರುವುದನ್ನು ನಿರೂಪಿಸಿಲ್ಲ. ಈ ನಿರತಿಶಯವಾದ ಶೋಕೋದ್ಗಾರವು ಹಲವಾರು ವಚನಗಳಲ್ಲಿ ವ್ಯಕ್ತವಾಗಿದ್ದು: ಇವುಗಳಲ್ಲಿ ಶೋಕವು ರಸದ ಪರಾಕಾಷ್ಠೆಗೆ ಏರಿರುವುದನ್ನು ಸಹೃದಯರು ಅನುಭವಿಸುವಂತೆ ಈ ತಾಪಕ್ರಮವು ವ್ಯಕ್ತವಾಗಿದೆ.

ತನ್ನ ಮಾನಸಿಕ ಕುಂದುಕೊರತೆಗಳನ್ನು ಚಿತ್ರಿಸುವಾಗ ಅತಿಯಾದ ಆತ್ಮ ಖಂಡನೆಯನ್ನು ಮಾಡಿಕೊಂಡಿರುವುದು ಕಂಡು ಬರುತ್ತದೆ. ಇದರಲ್ಲಿ ಅಂತರ್ಯದ ಕಳವಳವೂ ಇದೆ. ಸುಧಾರಿಸಿಕೊಳ್ಳಬೇಕೆಂಬ ಕಳಕಳಿಯೂ ಇದೆ.

ಸಾವಿರ ಜನರನ್ನು ಯುದ್ಧದಲ್ಲಿ ಗೆಲ್ಲುವುದಕ್ಕಿಂತ ತನ್ನ ಮನವನ್ನು ಗೆಲ್ಲುವುದು ಕಷ್ಟ ಎಂದ ಬುದ್ಧಗುರುವಿನ ವಿಚಾರವು ಬಸವಣ್ಣನಿಗೆ ಹೆಜ್ಜೆ ಹೆಜ್ಜೆಗೆ ಅನುಭವಕ್ಕೆ ಬಂದಿರಬೇಕು.

"ಹೇಡಿ ಬಿರುದ ಕಟ್ಟಿದಂತಾಯಿತ್ತು ಎನ್ನ ವೇಷ, ಕಾದಬೇಕು ಕಾದುವರೆ ಮನವಿಲ್ಲ. ಅಚ್ಚ ಶರಣರು ನಿಮ್ಮ ನಿಚ್ಚ ನಿಚ್ಚ ನೆನೆವರು. ಬಚ್ಚ ಬರಿಯ ಮಾತನಾಡುವೆನು. ಒಡೆಯರಿಗೆ ಒಡವೆಯನೊಪ್ಪಿಸಲಾರದೆ ಮೊರೆ ಇಡುವ ಮನವ ನಾನೇನೆಂಬೆ ? ನೆತ್ತಿಯಲಿ ಅಲಗು ತಿರುಹುವಂತಪ್ಪ ವೇದನೆಯಹುದೆನಗೆ. ಬೆಂದ ಕೊಯ್ದು ಮೂಗಿಂಗೆ ಕನ್ನಡಿಯ ತೋರುವಂತಪ್ಪ ವೇದನೆಯಹುದೆನಗೆ. ಹುಣ್ಣ ಕಂಬಿಯಲ್ಲಿ ರೇಸುವಂತಪ್ಪ ವೇದನೆಯಹುದೆನಗೆ. ಕೂ. ಸಂ. ದೇವ, ಮಾಡಿ ನೋಡುವ ಹಗರಣವ ನಾ ಮಾಡಿಹೆನೆಂದರೆ ಮನಕ್ಕೆ ಮನನಾಚದೇ ?

ತನುವಿನಲ್ಲಿ ಮಾತ್ರ ಶಿವಭಕ್ತನಾಗಿ ಮನದಲ್ಲೂ ಧನದಲ್ಲೂ ನಿ:ಸ್ಪೃಹ, ನಿಷ್ಕಾಮನಂತ ಸರ್ವಾರ್ಪಣಭಾವದ ಶಿವಭಕ್ತನಾಗಲಿಲ್ಲವೆಂಬ ಕೊರಗು ಈ ವಚನದಲ್ಲಿ ಮೂಡಿದೆ. ತಾನು ಶಿವಭಕ್ತಿಯ ಉನ್ನತಿಯ ಮಾರ್ಗವನ್ನು ಅವಲಂಬಿಸಿದರೂ

ಸಂಸಾರದ ಪ್ರಲೋಭನೆಗೆ ಒಳಗಾದುದನ್ನು ಅಂದಣನನೇರಿದ ಸೊಣಗನಂತೆ ಎಂದೂ ತನ್ನ ಚಾಂಚಲ್ಯವನ್ನು ಗೋಸುಂಬೆಗೂ ಮರ್ಕಟನಿಗೂ ಹೋಲಿಸಿಕೊಂಡನು. ಗೋಸುಂಬೆ ಬಣ್ಣ ಬದಲಾಯಿಸುವ ಕ್ಷುದ್ರ ಪ್ರಾಣಿ ಹೀನೋಪಮೆ ಹೀನರೂಪಕಳನ್ನು ಬಳಸಿಕೊಳ್ಳುವಲ್ಲಿ ಪ್ರಾಣಿಗಳನ್ನು ಬಳಸಿಕೊಂಡನು. (ಬಸವಣ್ಣನವರ ವಚನಗಳಲ್ಲಿ ಪ್ರಾಣಿ ರೂಪಕ ಪ್ರ. ಕ.)

ಶಿವಶರಣರನ್ನು ಅಮಂತ್ರಿಸಿ, ತನ್ನ ಗುರುಲಿಂಗಜಂಗಮ ಸೇವೆಯನ್ನು ಬೃಹತ್ ಪ್ರಮಾಣದಲ್ಲಿ ಕೈಕೊಂಡು ಬಸವಣ್ಣ ಶಿವಗಣಾರಾಧಕರಾದುದರಿಂದ ಶಿವಶರಣರ ನಾನಾ ರೀತಿಗಳಿಂದ ಅವನನ್ನು ಹೊಗಳುವುದರಿಂದ ಆತನಿಗೆ ಮನೋವ್ಯಥೆಯೇ ಅಧಿಕವಾಯಿತು.

ಹೊರಿಸಿಕೊಂಡು ಹೋದನಾಯಿ ಮೊಲವೇನ ಹಿಡಿವುದಯ್ಯಾ ? ಎನ್ನಲ್ಲಿ ಭಕ್ತಿ ಸಾಸಿವೆಯ ಷಡ್ಭಾಗದನಿತಿಲ್ಲ.
ಎನ್ನವರೊಲಿದು ಎನ್ನ ಶೂಲದಲಿಕ್ಕಿದರಯ್ಯಾ ಹೊಗಳಿ ಹೊಗಳಿ. ಹರನೇ,ನೊಂದೆನು ಸೈರಿಸಲಾರೆನು. ನೀನೆನಗೊಳ್ಳಿದನಾದರೆ ಎನ್ನ ಹೊಗಳತೆಗಡ್ಡಬಾರ ಎನ್ನ ಧರ್ಮಿ ಎಂದ ಬಸವಣ್ಣನಿಗೆ ಮನ್ನಣೆಯೇ ಮಸೆದರುಗಾಗಿ ತಾಗಿತಂತೆ ! ಬಸವಣ್ಣ ಅಸಾಧಾರಣ ವ್ಯಕ್ತಿಯೆಂಬುದನ್ನು ಇಂಥ ಮಾತುಗಳು ಕಾಣಿಸಿಕೊಡುತ್ತವೆ.

ಸಹಜ ಮಾನವ ದೌರ್ಬಲ್ಯಗಳು ಬಸವಣ್ಣನನ್ನು ಮೊದಮೊದಲು ಬಹಳವಾಗಿ ಕಾಡುತ್ತಿದ್ದವು. ತಾನು ಬೇಡಿದವರಿಗೆ ದಾನ ಮಾಡುವಂತ ಎಂಬ ಹಮ್ಮು ಅವನಿಗಿದ್ದುದಲ್ಲದೆ, 'ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ, ನಿಮ್ಮ ಶರಣರಿಗೆ ಮದ ೧೦ಳ ಶೂನ್ಯ ಸಂಪಾದನೆ.

ಎಂಬ ಹೆಮ್ಮೆಯಿಂದ ಪ್ರಭು ದೇವರಿಗೆ ಹೇಳಲಾಗಿ ಅಲ್ಲಮಪ್ರಭು"............ ನೀನಾವುದರಲ್ಲಿ ಏನನರ್ಪಿಸಿ ಭಕ್ತನಾದೆ ? ಎಂದು ಕೇಳಿದಾಗ ಅತಿಶಯ ಪಶ್ಚಾತ್ತಾಪಪಟ್ಟ............... ನಾನು ಮಾಡಿದೆನೆಂಬ ಕಿಚ್ಚು ಎನಗೆ ಸುಟ್ಟಿತ್ತು............ ಕೆಟ್ಟ ಹೇಡಿಂಗೆ ಕಡೆಯಿಲ್ಲ ! ಎಂದು ದು:ಖಿಸಿದನು. ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ " ಎಂದು ಆಮೇಲೆ ಅನುಭವವಾಯಿತು.

ಬಸವಣ್ಣನಿಂದ ಬಿಜ್ಜಳನಿಗೆ ಪ್ರತಾಪವೊದಗಿದ್ದಕ್ಕೆ ಬಸವಣ್ಣನು ದಂಡಾಧೀಶನಾಗಿದ್ದರೂ ಯುದ್ದದಲ್ಲಿ ಕಾಳಗಗಳಲ್ಲಿ ಸೈನ್ಯವನ್ನು ಚಾಕಚಕ್ಯತೆಯಿಂದ ನಡೆಸಿ ಗೆಲುವನ್ನು ತಂದುಕೊಟ್ಟಿದ್ದನೆಂಬುದಕ್ಕೆ ಆಧಾರ ಸಿಗುವುದಿಲ್ಲ. ಇಲ್ಲಿ ಬಸವಣ್ಣ



ದಂಡಾಧೀಶ ಎಂದಿದ್ದರೂ ಆತನು ಸೈನ್ಯದಲ್ಲಿ ಸೇನಾಪತಿಯಾಗಿದ್ದಿರದೆ ರಾಜನ ದೊಡ್ಡ ಅಧಿಕಾರಿಯಾಗಿದ್ದನು ಎಂದೇ ಕಾಣುತ್ತದೆ. ಬಸವಣ್ಣನು ತನ್ನ ವಚನಗಳಲ್ಲಿ ಯುದ್ಧದಲ್ಲಿ ಉಪಯೋಗಿಸುವ ಹಲವು ಆಯುಧಗಳನ್ನು ವೇಷಭೂಷಣಗಳನ್ನು ಹಲವಡೆ ಉಲ್ಲೇಖಿಸಿದ್ದನು.

ಜನ್ನ ಕವಿಯು ತನ್ನನ್ನು ಕುರಿತು ಬಣ್ಣಿಸಿಕೊಳ್ಳುವಲ್ಲಿ ನಿಂದಿರೆ ದಂಡಾಧೀಶಂ, ಕುಳ್ಳಿರೆ ಮಂತ್ರಿ, ತೊಡಂಕೆ ಕಲಿ ಜನಾರ್ದನದೇವಂ ' ಎಂದು ತಿಳಿಸಿದುದಲ್ಲದೆ, ಕಾವ್ಯಕಳಾಪರಿಣತಿ ಹಾಗೂ ಖಳ್ಗ (ಖಡ್ಗ) ಕಲಾಪರಿಣತಿ ಎರಡು ತನಗೆ ಇದ್ದುದನ್ನು ಸ್ಪಷ್ಟವಾಗಿ ಹೇಳಿದ್ದನು.

ಬಸವಣ್ಣನು ತನ್ನ ಲೋಪದೋಷಗಳನ್ನು ಎತ್ತಿ ತಿಳಿಸುವಂಥ ವಚನ ಬರೆದುದು ಹಲವುಂಟು, ಅವುಗಳಲ್ಲಿ ಇವೆಯದ ವೀರವ ಇಲ್ಲದ ಸೊಬಗುವ ಎಲ್ಲಾ ಒಡೆಯರು ಏರಿಸಿ ನುಡಿವರು. ಇನ್ನೊಂದು ವಚನದಲ್ಲಿ ಹೊರಿಸಿಕೊಂಡು ಹೋದ ನಾಯಿ ಮೊಲನೇನ ಹಿಡಿವುದಯ್ಯಾ? ಅಗು ಭಕ್ತನೆಂಬೆನಯ್ಯಾ" ಎಂಬಲ್ಲಿಯೂ ಇರಿವುದು ಭಕ್ತಿಮಾಡುವುದು ತಾನು ಯುದ್ಧದಲ್ಲಿ ಇರಿಯದ ವೀರ[ಹೇಡಿ] ಎಂಬುದನ್ನು ಭಕ್ತಿಯ ಕ್ಷೇತ್ರದಲ್ಲಿ ಹೇಡಿ ಎಂಬ ಅರ್ಥದಲ್ಲಿ ಬಳಸಿರುವಂತಿದೆ.

ಎಲ್ಲರು ವೀರರು ಎಲ್ಲರು ಧೀರರು, ಎಲ್ಲರು ಮಹಿಮರು, ಎಲ್ಲರು ಪ್ರಮಥರು ಕಾಳಗದ ಮುಖದಲ್ಲಿ ಕಾಣಬಹುದು. ನಮ್ಮ ಕೂಡಲ ಸಂಗನ ಶರಣರು ಧೀರರು, ಉಳಿದವರೆಲ್ಲ ಅಧೀರರು.

ಗರುಡಿಯ ಕಟ್ಟೆ ಅರವತ್ತುನಾಲ್ಕು ಕೋಲು ಅಭ್ಯಾಸವ ಮಾಡಿದೆನಯ್ಯಾ. ಇವೆವ ಗಾಯ ಬಂಡೆಯ ಭೇದವನೂ ತಿಳಿಯದ ಪ್ರತಿ ಗರುಡಿಕಾರ ಬಿರುದ ಪಾಡಿಗೆ ಒದಗಲು ವೀರಪಟ್ಟಿಯ ಕಟ್ಟಿ ತಿಗರಿಯ ನೇಯಿಸಿಕೊಂಬೆ, ಗುರು ಕಳನನೇಯಿಕರಿಗು ಕೊಂಡಲ್ಲಿ ಹೋಯಿತ್ತಾಗಳೆ ಎಂದಡೆ, ಎನ್ನ ನಿಮ್ಮಲ್ಲಿ ನೋಡು..............'

ಇಲ್ಲಿ ಬಿರುದ ಪಾಡಿಗೆ ಬಿರುದನ್ನು ಹೊಗಳುವ ಹಾಡಿಗೆ ಎಂದು ಅರ್ಥ. ಇಲ್ಲಿ ಬಿರುದ ಪಾಡಿಗೆ ಬಿರುದನ್ನು ಹೊಗಳುವ ಜಾರಣರು ಯುದ್ಧದಲ್ಲಿ ಅವರ ಬಿರುದನ್ನು ವೀರರ ಸಾಹಸಗಳನ್ನು ಹೊಗಳುವ ಹಾಡಿನಿಂದ ಹೊಗಳುತ್ತಿದ್ದರು.

"ಶಿವಶರಣನೆಂಬ ದಂಡಗೊಡ್ಡಿ
ಗಣಮೇಳವೆಂಬಲಗಿನಲ್ಲಿರವೆ
ಇಲ್ಲಿ ಬಸವಣ್ಣನ ಭಕ್ತಿವೀರ ಸ್ವಾಮಿಯೇ ಪ್ರಕಟಗೊಂಡಿದೆ.

(ಮುಂದುವರಿಯುತ್ತದೆ)

### ಸುಭಾಷಿತ

ಶಾಂತಿ ಎಂಬುದು ಪರ್ವತಗಳನ್ನು ಪರಿವರ್ತಿಸುವುದರಿಂದ ಸಿಕ್ಕುವುದಿಲ್ಲ. ಮನುಷ್ಯನನ್ನು ಪರಿವರ್ತಿಸುವುದರಿಂದ ಸಿಗುತ್ತದೆ.

—ಗ್ರಿಫಿತ್

ಸಂಕಟದಲ್ಲಿ ಸಿಕ್ಕಿದ್ದರೂ ಕೂಡ ಸಜ್ಜನನು ತನ್ನ ಸ್ವಭಾವವನ್ನು ಬಿಡನು ಕರ್ಪೂರಕ್ಕೆ ಬೆಂಕಿ ತಗುಲಿದಾಗಲೂ ಕೂಡ ಅದು ಸುವಾಸನೆಯನ್ನೇ ಹೆಚ್ಚಾಗಿ ಕೊಡುತ್ತಾನೆ.

—ದೃಷ್ಟಾಂತ ಕಲಿಕಾಶತಕಂ

" SIDDAGANGA " MONTHLY Reg No KRNQ-9



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ-572104.